# ಗಾಂಧೀಜಿಯ ಹಾಸ್ಯಪ್ರವೃತ್ತಿ

ಕಂದಾಡೆ ಕೃಷ್ಣಯ್ಯಂಗಾರ್, ಬಿ. ಎ.
ಅಧ್ಯಾಪಕ, ದೇಶೀಯ ವಿದ್ಯಾಶಾಲಾ, ಬೆಂಗಳೂರು.

೧೯೪೦

ಬೆಂಗಳೂರು ಸಿಟಿ
ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲಿ
ಅಚ್ಚಾಗಿ ಪ್ರಕಟವಾದುದು

# ಮುನ್ನುಡಿ

ದೇಶೀಯ ವಿದ್ಯಾಶಾಲೆಯಲ್ಲಿ ಗಾಂಧೀಜಯಂತಿ ನಡೆದಾಗ ಕೊಟ್ಟ ಒಂದು ಉಪನ್ಯಾಸದ ವಿಸ್ತಾರರೂಪ ಮಾತ್ರ ಇದು.

ವಿಷಯುವನ್ನು ಸಮರ್ಪಕವಾಗಿ ವಿವರಿಸಲು ತಕ್ಕ ಯೋಗ್ಯತೆ ಯಾವುದೂ ಇಲ್ಲ. ಗುಜರಾಥಿ ಹಿಂದೀ ಭಾಷೆಗಳನ್ನು ತಿಳಿದು ಗಾಂಧೀಜಿಯ ಮಾತುಕಥೆಗಳನ್ನು ಗ್ರಹಿಸಬಲ್ಲವನಾಗಿಯೋ ಗಾಂಧೀಜಿಯ ಪರಿವಾರದವನೊಬ್ಬನಾಗಿಯೋ ಇದ್ದಲ್ಲಿ ಯೋಗ್ಯತೆಯನ್ನು ನಟಿಸಬಹುದಾಗಿತ್ತು. ಇಂಗ್ಲಿಷ್ ಮಾತುಕಥೆಗಳಲ್ಲಿ ತುಂಬಿದ ಸ್ವಾರಸ್ಯವನ್ನು ಅನುವಾದದಲ್ಲಿಟ್ಟು ಬರೆಯುವ ದಕ್ಷತೆಯೂ ಇಲ್ಲ.

ಬೇರಾವ ಪುಸ್ತಕವೂ ಈ ವಿಷಯವಾಗಿ ಕನ್ನಡದಲ್ಲಿ ಕಾಣದಿರುವ ನೆಪವೇ ಈ ಪ್ರಕಟನೆಯ ಸಾಹಸಕ್ಕೆ ಕಾರಣ. ಇಲ್ಲಿ ಕಾಣಬಹುದಾದ ಲೋಪಗಳನ್ನು ಕನ್ನಡಿಗರು ಮನ್ನಿಸಿಕೊಡಬೇಕು. ಎಷ್ಟಾದರೂ ಇದು ಲೆಕ್ಚರು!

ಇಲ್ಲಿಯ ವೃತ್ತಾಂತಗಳಲ್ಲಿ ಕೆಲವು ಮಾತ್ರ ಉಪನ್ಯಾಸಕನ ಅಥವಾ ಮಿತ್ರರ ಅನುಭವದ ಸರಕು. ಉಳಿದವೆಲ್ಲವೂ ಅಚ್ಚಾಗಿರುವ ರಾಶಿಯಿಂದ ಆಯ್ದುದ್ದು. ಅಪಾರ್ಥಕ್ಕೆಡೆಗೊಡದಂತೆ ಆ ವೃತ್ತಾಂತಗಳ ವಿವರವು ಇಲ್ಲಿ ದೊರೆತರೆ ಕೃತಾರ್ಥ.

**ಕಂ. ಕೃಷ್ಣಯ್ಯಂಗಾರ್**

# ಗಾಂಧೀಜಿಯ ಹಾಸ್ಯಪ್ರವೃತ್ತಿ

“ಎಲ್ಲಿಯಾದರೂ ಉಂಟೆ? ಪರಮಪೂಜ್ಯನಾದಾತನು, ಲೋಕ ವಂದ್ಯಯತಿಯಾದಾತನು, ಸದಾ ಭಗವದ್ಧ್ಯಾನನಿರತನಾದಾತನು, ಭಾರತಭೂಮಿಯ ಅಗಣ್ಯಕ್ಲೇಶಗಳನ್ನು ತಲೆಯಮೇಲೆ ಹೊತ್ತಿರುವಾತನು ಹಾಸ್ಯಗಾರನೇ? ತನಗೇ ನಗುವುದಕ್ಕೆ ಕಾರಣವಾಗಲಿ ಹೊತ್ತಾಗಲಿ ಇಲ್ಲದಿರುವಾತನು ಅನ್ಯರನ್ನು ನಗಿಸುವ ವರ್ತನೆಯಲ್ಲಿ ತೊಡಗಲು ಸಾಧ್ಯವೇ? ಗಾಂಧೀಜಿಯೆಂದರೇನು ವಿಕಟಕವಿಯೇ? ಈ ಸೋಜಿಗದ ಮಾತನ್ನು ಹೇಳಿದವರ ತಲೆಯಲ್ಲಿ ಬುದ್ಧಿಯಿರುವುದೇ? ಅಯ್ಯೋ ಪಾಪ! ಗಾಂಧೀಜಿಯನ್ನು ತೆನಾಲಿ ರಾಮಕೃಷ್ಣನ ಅಥವಾ ನಕಲಿ ಶ್ಯಾಮನ ಜೊತೆಗಾರರನ್ನಾಗಿ ಎಣಿಸುವಷ್ಟು ಮುಟ್ಠಾಳತನವೇ! ಆಬಾಲವೃದ್ಧರನ್ನು ನಗಿಸಬಲ್ಲವನೆಂದು ಜಗತ್ಪ್ರಸಿದ್ಧನಾದ ಆ ಮಹಾಕಪಿ ಚಾರ್ಲಿ ಚಾಪ್ಲಿ ಹೆಸರು ಕೂಡ ಕೇಳಿರಲಿಲ್ಲವೇ ಗಾಂಧಿಯವರು! ಅಂತಹವರ ಜೀವನದಲ್ಲಿ ಹಾಸ್ಯಪ್ರವೃತ್ತಿಗೆ ಪ್ರವೇಶವಿದ್ದೀತೇ?”

ಎಂದು ಕೇಳತಕ್ಕವರಿಗೆ ಗಾಂಧಿಯವರ ವಾಕ್ಯವೇ ಪ್ರತ್ಯುತ್ತರ. “ನನ್ನ ಚಿತ್ತವೃತ್ತಿಯಲ್ಲಿ ಹಾಸ್ಯತೋರದಿದ್ದದ್ದರೆ ಎಂದೋ ನಾನು ಆತ್ಮಹತ್ಯ ಮಾಡಿಕೊಳ್ಳುತ್ತಿದ್ದೆನು” ಎಂದು ಅನೇಕಸಲ ಅವರ ಬಾಯಿಂದ ಬಂದಿದೆ. ಗಾಂಧಿಯವರು ನಗುವುದೂ ನಿದ್ದೆಮಾಡುವುದೂ ಹಾಲು ಹಸುಳೆಯಂತೆ; ಕಂಡವರೆಲ್ಲರಿಗೂ ಗೊತ್ತು. ಸದಾ ನಗುತ್ತ ನಗಿಸುತ್ತಲಿರುವುದೇ ಅವರ ಸ್ವಭಾವ; ನಿಷ್ಠುರ, ಕಠಿನ, ಕಠೋರ, ಕ್ರೂರಲಕ್ಷಣವೊಂದಾದರೂ ಅವರ ಮುಖದಲ್ಲಿಲ್ಲ. ನಿಷ್ಠುರ ಅಥವಾ ಗಂಭೀರವಾದ ಸಮಯದಲ್ಲಿಯೂ ಪ್ರಸನ್ನತೆಯಾಗಲಿ ಚಾರುಹಾಸವಾಗಲಿ ಅಂತರ್ಧಾನವಾಗುವುದೇ ಇಲ್ಲ. ರೋಗಪೀಡಿತರಾಗಿ ಹಾಸಿಗೆ ಹಿಡಿದಾಗಲೂ ನಗುತ್ತ ಸಮೀಪವರ್ತಿಗಳನ್ನು ನಗಿಸುತ್ತ ಇರುತ್ತಾರೆ. ಜೀವನದಲ್ಲಿ ನಗುವನ್ನು ಕಾಣದವರ ಸಮೀಪದಲ್ಲಿ ಮಕ್ಕಳು ಸುಳಿದಾಡಿದರೆ ಸಹಜವಾಗಿ ಹುಟ್ಟುವುದು ರೇಜಿಗೆ, ಕೋಪ. ಗಾಂಧೀಜಿಯ ಸಮೀಪಕ್ಕೆ ಓಡುವ ಮಕ್ಕಳ

ಆತುರ ಪೆಚ್ಚೋ ಮಕ್ಕಳನ್ನು ಸವಿಾಪಕ್ಕೆ ಕರೆಸಿಕೊಂಡು ಆಟವಾಡುವ ಅವರ ಆತುರವೇ ಪೆಚ್ಚೋ ನೋಡಿದವರಿಗೆ ಹೇಳುವುದು ಕಷ್ಟ. ಗಾಂಧಿಯವರು ನಕ್ಕಾಗ ತೋರಿಕೊಳ್ಳುವ ಕಾಂತಿಯು ಹಸುಮಕ್ಕಳ ನಗುವಿನಲ್ಲಿ ತೋರುವ ಕಾಂತಿಯಂತೆ ಸ್ವಚ್ಛವಾದುದು. ಆದ್ದರಿಂದಲೇ ಶ್ರೀಮತಿ ಸರೋಜಿನಿದೇವಿಯು ಒಂದುಸಲ ದರ್ಶನಕ್ಕಾಗಿ ಎರಡು ಗಂಟೆ ಕಾಲ ಕಾದಿದ್ದು ಹಿಂತಿರುಗಿ ಹೋಗುವಾಗ "ಹಲ್ಲಿಲ್ಲದ ನಿಮ್ಮ ಬಾಯಿಯಲ್ಲಿ ಆಡುವ ನಗುವನ್ನು ಕಾಣಬೇಕೆಂಬ ನನ್ನ ಆಸೆ ಭಗ್ನವಾಯಿತು" ಎಂದು ಚೀಟಿಯನ್ನು ಬರೆದು ಕಳುಹಿಸಿದುದು.

ಚಕ್ಕುಲಗುಳಿಯಿಟ್ಟರೆ ಎಲ್ಲರಿಗೂ ನಗು ಬರುವುದೇನೋ ಸಹಜ. ಆದರೆ ಚಕ್ಕುಲಗುಳಿಗೆ ಸಿಕ್ಕದಿರುವವರು ಎಷ್ಟೋ ಮಂದಿ. ನಗುತ್ತಾರೆಯೋ ಇಲ್ಲವೋ ಎಂಬ ಸಂದೇಹಕ್ಕಾಸ್ಪದ ಕೊಡುವಂತೆ ಇರುವವರೂ ಲೋಕದಲ್ಲಿರುತ್ತಾರೆ; ಸಂದೇಹವಿಲ್ಲ. ದೃಷ್ಟಾಂತಕ್ಕೆ 'ಆಲಂಗೀರ್ ಸಿಂದಾಪೀರ್' ಎಂದೆನ್ನಿಸಿಕೊಂಡ ಔರಂಗಸೀಬ್ ಬಾದಷಹನಿಗೆ ಚಕ್ಕುಲಗುಳಿಯಿಡಲು ಯಾರಿಗೆ ಧೈರ್ಯವಿತ್ತು! ಆ ಬಾದಷಹನ ನಗುವು ಭಯಾನಕವಾಗಿಯೇ ಇತ್ತು. ಆತನಲ್ಲಿ ಹಾಸ್ಯಗ್ರಹಣವೇ ಇದ್ದ ಹಾಗೆ ತೋರುವುದಿಲ್ಲ. ಭಾನುವಾರದ ದಿನದಲ್ಲಿಯೂ ಇಲಿಗಳ ಬೇಟೆಯನ್ನು ನಡೆಸಿದ ತಮ್ಮ ಮನೆಬೆಕ್ಕುಗಳನ್ನು ಸೋಮವಾರ ದಿನ ಹಿಡಿದು ನೇಣು ಹಾಕಿಸುತ್ತಿದ್ದ ಇಂಗ್ಲೀಷ್ ಪ್ಯೂರಿಟನ್ನರಲ್ಲಿ ಹಾಸ್ಯಕ್ಕೆಡೆಯಿಲ್ಲ;

**ನಗದ ರೋಗ**

ಹಾಗೆಯೇ ಔರಂಗಸೇಬನ ಚಿತ್ತವೃತ್ತಿಯಲ್ಲಿಯೂ ಹಾಸ್ಯಕ್ಕೆ ಸ್ಥಳವಿರಲಿಲ್ಲ. ಸಂಗೀತವನ್ನು ಹೂಳುತ್ತೇವೆಂದು ಬಾಯಿಬಡಕೊಳ್ಳುತ್ತ ಅರಮನೆಯ ಮುಂದೆಯೇ ಚಟ್ಟವನ್ನು ಹೊತ್ತು ಸಂಗೀತಗಾರರು ತಮಗೆ ತೋರಿದ ಭಾರಿ ಕುಚೋದ್ಯವನ್ನು ನಡೆಸಿದರು; ಸಂಗೀತಕ್ಕೆ ನಾವುಂಟೆಂದು ಅವರು ನಂಬಿರಲಾರರು. ಆ ಬಾದಷಹನ ಬಳಿ ಈ ಹಾಸ್ಯಕ್ಕೆ ಅರ್ಥವಾಗಲಿ ಪ್ರಯೋಜನವಾಗಲಿ ದೊರಕಲಿಲ್ಲ. ಔರಂಗಸೀಬ್ ಬಾದಷಹನಿಗೂ ಪ್ಯೂರಿಟನ್ನರಿಗೂ ಹಾಸ್ಯಗ್ರಾಹಿಗುಣವಿದ್ದಿದ್ದ ಪಕ್ಷದಲ್ಲಿ ಅವರ ಇತಿಹಾಸವು ರೂಪಾಂತರವನ್ನು ತಾಳುತ್ತಿತ್ತು. ಮಹತ್ವದ ಕರ್ತವ್ಯವನ್ನು

ಹೊರುವುದರಲ್ಲಿ ಕ್ಲೇಶವನ್ನು ದ್ವಿಗುಣಿತವಾಗಿ ಅನುಭವಿಸುವ ಬದಲಾಗಿ ಅವರೂ ಚಿತ್ತದಲ್ಲಿ ನೆಮ್ಮದಿಯನ್ನು ಅನುಭವಿಸಬಹುದಾಗಿತ್ತು. ಏಕೆಂದರೆ ತಾವೂ ನಗದೆ ಬೇರೆಯವರು ನಗುವುದನ್ನೂ ಕಾಣದೆ ಜೀವನ ವನ್ನು ನಡೆಸುವುದು ಘೋರವಾದ ನರಕಯಾತನೆ. ನಗುವಿನ ಅಭ್ಯಾಸ ತಪ್ಪಿದರೆ ಮನಸ್ಸು ರೋಗಕ್ಕೆ ಸಿಕ್ಕಿ ಹುಳಿಹುಳಿಯಾಗಿ ಟೊಳ್ಳುಗಟ್ಟಿಯ ನಾಗತ್ತಿಯ ಮನಸ್ಸಿನಂತೆ ಆಗಿ ಸುಖದ್ವೇಷಿಯಾಗಿ ಪರಿಣಮಿಸುವುದು. ಹಾಗಿರುವವರನ್ನು ಶಠಂದೀಕ್ಷಿತರೆನ್ನುವುದು ಲೋಕರೂಢಿ.

ಜೀವನದಲ್ಲಿ ಹಾಸ್ಯದ ರುಚಿಯಿಲ್ಲದಿದ್ದರೆ ರೋಗಗ್ರಸ್ತನೆಂಬು ದೇನೋ ದಿಟ. ಆದರೆ ಎಂತಹ ಹಾಸ್ಯ? ಹಾಸ್ಯದಲ್ಲಿ ಭೇದಾಭೇದಗಳಿ ಲ್ಲವೇ? ಉಚ್ಚ, ನೀಚಹಾಸ್ಯಗಳು, ಒಣಹಾಸ್ಯ, ಹುಚ್ಚುಹಾಸ್ಯ, ಗಲೀಜು ಹಾಸ್ಯ ಇತ್ಯಾದಿಗಳುಂಟಲ್ಲವೇ! ನಕ್ಕಷ್ಟೂ ಹಾಸ್ಯಗ್ರಾಹಿತನ

ನಗೆಯ ಬಗೆ

ವಿರುವುದಾದರೆ ನಗುವ ರೋಗಹಿಡಿದವರೇ ಉತ್ತಮ ಹಾಸ್ಯಗ್ರಾಹಿಗಳಾದ ರಸಜ್ಞರೆನಿಸಿಯಾರು. ಹೊಲಸು ಮಾತುಗಳನ್ನು ಹೇಳಿದಾಗ ಹಾಸ್ಯಹೀರುವವರನ್ನು ಹೊಲಸುತುಂಬಿದ ತಿಪ್ಪೆಯಲ್ಲಿ ಕೂರಿಸಿದರೆ ನಗಬಲ್ಲರೇ? ಅರ್ಥವಿಲ್ಲದ ನಗುವನ್ನು ಕಂಡರೆ "ಅಯ್ಯೋ! ಪಾಪ" ಎನ್ನುವುದೂ ಮಾನಗೆಟ್ಟ ಹಾಸ್ಯ ವನ್ನು ಕಂಡು "ಥು! ಅಸಹ್ಯ!"ವೆನ್ನುವುದೂ ಪ್ರಾಜ್ಞರ ಸಾಮಾನ್ಯ ಚರ್ಯೆ. ನಟನೆಯ ಮುಗುಳ್ನಗೆಯನ್ನು ಬೀರುವವರ ಮುಖಕಾಂತಿಯೂ ಅಸಹ್ಯವೇ. ಇನ್ನು ಸರಿಯಾದ ಹಾಸ್ಯ, ಶುದ್ಧವಾದ ನಗು ಯಾವುದು? ಅರ್ಥವಿರಬೇಕು, ಮಾನವಿರಬೇಕು, ನೋವಿರಬಾರದು; ಆದರೆ ನಗು ಬರಬೇಕು. ಇದು ಹೇಗೆ ಸಾಧ್ಯ?

ಲೋಕದಲ್ಲಿ ಬದುಕಿ ಬಾಳುವ ಕೋಟ್ಯಂತರ ಮಾನವಜೀವಿಗಳಲ್ಲಿ ನಗುವೆನ್ನುವುದೇನು, ನಗುವುದೇತಕ್ಕೆ, ನಗುಹುಟ್ಟುವುದು ಹೇಗೆ, ಎಂಬ ಪ್ರಶ್ನೆಗಳನ್ನು ಹುಟ್ಟಿಸಿಕೊಂಡು ಬಿಡಿಸಲು ಯತ್ನಿಸುವವರು ತತ್ತ್ವ ಜ್ಞರು. ನಾವಾದರೆ ನಗುಬಂದಾಗ ನಕ್ಕು ತೆಪ್ಪನಾಗುತ್ತೇವೆ; ತತ್ತ್ವ ಜ್ಞರು, ವೈಯ್ಯಾಕರಣಿಗಳು, ತಾರ್ಕಿಕರು ಮುಂತಾದವರು ನಮ್ಮ ಹಾಗಲ್ಲ. ಅಂತಹವರಲ್ಲಿ ಒಬ್ಬಾನೊಬ್ಬರು "ಸಂಬಂಧವೇ ಇಲ್ಲದಿರುವ

ಅಂಶಗಳಿಗೆ ಆಕಸ್ಮಿಕವಾಗಿ ಸಂಬಂಧವನ್ನು ಕಟ್ಟುವುದರಿಂದಲೋ ಮತ್ತೊಬ್ಬರಲ್ಲಿ ನಮಗಿಂತಲೂ ಕೀಳಾದ ಲಕ್ಷಣವನ್ನು ಬುದ್ಧಿಯ ಸೂಕ್ಷ್ಮತೆಯಿಂದ ಕಂಡಾಗಲೋ ನಗುವೆಂಬ ಚರ್ಯೆಹುಟ್ಟುವುದು" ಎಂದು ಬರೆದಿಟ್ಟನು. ಆತನಿಗಿಂತ ಹೆಚ್ಚು ವಿಚಾರದಕ್ಷತೆಯಾಗಲಿ ಪರೀಕ್ಷಾ ಕುತೂಹಲವಾಗಲಿ ಇಲ್ಲದಕಾರಣ ಆತನ ವಾಕ್ಯವನ್ನೊಪ್ಪಿಬಿಡೋಣ. ನಮಗೆ ಕಾಣುವ ನಗುವಿನ ಸನ್ನಿವೇಶಗಳೆಲ್ಲವೂ ಆತನ ವಾಕ್ಯಾಂಶಗಳಿಗೆ ಉದಾಹರಣೆಗಳಾಗಿಯೇ ಇರುತ್ತವೆ; ಅಷ್ಟೇ ಸಾಕು. ಇತರರ ಕೀಳನ್ನು ಕಂಡಾಗ ನಗುವುದು ಮಾನವ ಸ್ವಭಾವವಿರಬಹುದು; ಅದರಲ್ಲಿ ಉತ್ತಮ-ಮಧ್ಯಮ-ಅಧಮ ವರ್ಗಗಳು ತೋರಿಕೊಳ್ಳದೆ ಹೋಗಲಿಲ್ಲ. ಮತ್ತೊಬ್ಬರಿಗೆ ನೋವನ್ನುಂಟುಮಾಡುವುದಾದರೆ ನಮ್ಮ ನಗು ಅಧಮ ಜಾತಿಯದು; ಅಂಗವಿಕಲರನ್ನು ಕಂಡು ನಕ್ಕಹಾಗೆ. ನೋವಾಗಬಹುದಾದರೂ ಆದ ನೋವನ್ನು ಸಹಿಸಿಕೊಳ್ಳುವ ಸಿದ್ಧತೆಯಿರುವಾಗ ನಗುವುದು ಪ್ರಾಯಶಃ ಮಧ್ಯಮ. ಇತರರಂತೆಯೇ ತಾನೂ ಮಾನವ ರಾಶಿಯ ಜೀವಿಯೊಬ್ಬನೆಂಬ ಪ್ರಜ್ಞೆಯನ್ನು ಸದಾ ಮನಸ್ಸಿನಲ್ಲಿ ತುಂಬಿಕೊಂಡು ಇತರರ ಚರ್ಯೆಯಲ್ಲಿ ಹಾಸ್ಯವನ್ನು ಕಂಡಹಾಗೆಯೇ ತನ್ನ ಚರ್ಯೆಯಲ್ಲಿಯೂ ಕಾಣುವುದು ಮತ್ತು ಕಾಣಿಸುವುದು ನಿಸ್ಸಂದೇಹವಾಗಿ ಉತ್ತಮ. ಉತ್ತಮವಾದುದರಿಂದಲೇ ಅಪರೂಪ. ಅಪರೂಪವೆಂದು ಉತ್ತಮವಲ್ಲ; ಉತ್ತಮವೆಂದು ಉತ್ತಮ.

ಹಾಸ್ಯದ ಸನ್ನಿವೇಶಗಳಲ್ಲಿ ನಾನಾ ಬಗೆಗಳು ಹೇಗೋ ಹಾಸ್ಯ ಗ್ರಹಣದಲ್ಲಿ ನಾನಾ ಬಗೆಗಳೂ ಹಾಗೆಯೇ. ಬುದ್ಧಿಯು ಮಂದವಾಗಿದ್ದರೆ ಹಾಸ್ಯಗ್ರಹಣವೂ ಮಂದ; ಚುರುಕಾಗಿದ್ದರೆ ಹಾಸ್ಯಗ್ರಾಹಿತನವೂ ಚುರುಕು. ಕನ್ನಡ ಪುಸ್ತಕಗಳಲ್ಲಿ ದಡ್ಡನ ಕಥೆ, ನಗೆಗಡಲುಗಳು ಒರಟು ಹಾಸ್ಯದ ರಾಶಿಗೆ ಸೇರಿದವು; ಹೆಚ್ಚುಕಡಿಮೆ 'horseplay' ಎಂದು ಇಂಗ್ಲೀಷಿನಲ್ಲಿ ಹೇಳುವ ತೆರದ್ದು; ಕತ್ತೆಯಾಟ ಅಥವಾ ಒನಕೆಸರಸವೆಂದು ಅನುವಾದ ಮಾಡಿಕೊಳ್ಳಬಹುದು. ತೆನಾಲಿ ರಾಮಕೃಷ್ಣ, ಬೀರಬಲರಾಜರ ಹಾಸ್ಯವೂ ಒಂದೇ ಜಾತಿ; ಪಾಳೆಯಗಾರರ ಶೃಂಗಾರವೂ ಅದೇ ಜಾತಿ. ನಾಟಕಗಳಲ್ಲಿ ತೋರುವ ವಿದೂಷಕರ ಹಾಸ್ಯ ಇವಕ್ಕಿಂತ

ಮೇಲು. ಅದಕ್ಕಿಂತ ಮೇಲಾದ ಹಾಸ್ಯವನ್ನು ನಮ್ಮ ನಿತ್ಯಜೀವನದಲ್ಲಿಯೇ ಬುದ್ಧಿಸೂಕ್ಷ್ಮತೆಯಿಂದ ಗುರುತಿಸಬಹುದು. ನಮ್ಮ ಇಷ್ಟಮಿತ್ರರ ಸರಸಸಲ್ಲಾಪಗಳಲ್ಲಿ ಹಾಸ್ಯದ ಸನ್ನಿವೇಶಗಳನ್ನು ಸ್ವಲ್ಪ ದೂರ ಪರಿಶೀಲಿಸಿದರೆ ಸೂಕ್ಷ್ಮವಾದ ಹಾಸ್ಯದ ಬಗೆಯು ಗೋಚರವಾದೀತು. ಹಾಸ್ಯವನ್ನು ಹುಟ್ಟಿಸಿಕೊಟ್ಟು ಅಲಂಕಾರಗೊಳಿಸುವ ರೀತಿಯೂ ಕಂಡೀತು. ಬುದ್ಧಿಯು ಸೂಕ್ಷ್ಮತೆಯು ಆ ಮಟ್ಟವನ್ನು ಹಿಡಿದಾಗ ಅಹಂಭಾವವೂ ಕಡಿಮೆಯಾಗಿ ತಿರಸ್ಕರಿಣಿಗೆ ಸಿಕ್ಕಿ ಮಾಯವಾಗುವುದು. ಸ್ವಂತ ಚರ್ಯೆಯನ್ನು ನೋಡಿಕೊಂಡೇ ನಗುವ ಧಾರಾಳತೆಯು ಮನಸ್ಸಿನಲ್ಲಿ ಸಹಜವಾಗುವುದು. ಇಂತಹ ಧಾರಾಳವು ಚಿತ್ತವೃತ್ತಿಯಲ್ಲಿ ದೃಢವಾದಾಗ ಮನಸ್ಸು ಪಕ್ವ.

ಒಬ್ಬಾನೊಬ್ಬರು ಶ್ರೋತ್ರಿಯ ವಂಶಜಾತರು ಪೋಲೀಸ್ ಇಲಾಖೆಯಲ್ಲಿ ಭಾರಿ ಹುದೆಗೆ ಗೇರಿದ್ದಾದರು. ಆ ಪೋಲೀಸ್ ಹುದ್ದೆಯ ಅಲಂಕಾರವನ್ನು ಧರಿಸಿ ಕನ್ನಡಿಯಲ್ಲಿ ನೋಡಿಕೊಳ್ಳುತ್ತಾ "ಅಯ್ಯೋ, ಋಣಪಾತಕ, ಅನುಭವಿಸು! ಘನಪಾಠಿಗಳ ಹೊಟ್ಟೆಯಲ್ಲಿ ಹುಟ್ಟಿದವನಿಗೆ ಚಕ್ಕಳದ ಆಭರಣಗಳು! ಅನುಭವಿಸು, ಅನುಭವಿಸು" ಎಂದು ಹೇಳಿಕೊಂಡರಂತೆ. ಅಹಂಭಾವದ ಅದೃಶ್ಯತೆಗೆ ಮಾತ್ರ ಇದು ದೃಷ್ಟಾಂತ. ಆದರೆ ಹುಳಿಯ ವಾಸನೆ ಸ್ವಲ್ಪ ಇದೆ. ತಾತ್ಸಾರ ತಿರಸ್ಕಾರಗಳಲ್ಲಿ ಹಾಸ್ಯ ಹುಟ್ಟಿದಂತಿದೆ. ಆದುದರಿಂದ ಇದನ್ನು ಪರಿಶುದ್ಧವೆಂದೊಪ್ಪದಿದ್ದರೂ ಇರಬಹುದು; ಆ ಮಾತು ಬೇರೆ. ತನ್ನಲ್ಲಿ ತಾನೇ ಇಂತಹ ತಿರಸ್ಕಾರವನ್ನು ತೋರುವುದು ಅಹಂಕಾರದ ವೈಭವಕ್ಕಿಂತಲೂ ಮೇಲು. ಅಪಸ್ಮಾರವೆಂಬುದನ್ನು ರೋಗವೆಂದೇ ಎಣಿಸುತ್ತೇವೆ. ಆದರೆ ನಿತ್ಯಜೀವನದಲ್ಲಿ ಪ್ರತಿಯೊಬ್ಬರಿಗೂ ಒಂದಲ್ಲದಿದ್ದರಿನ್ನೊಂದು ಸಂದರ್ಭದಲ್ಲಿ ಒಡಿದೇ ಹಿಡಿಯುತ್ತದೆ ಆ ಅಪಸ್ಮಾರ! ಇಂಗ್ಲೀಷಿನಲ್ಲಿ Absence of Mind ಎನ್ನುವುದು ಕ್ಷಣಿಕವಾಗಿ ತೋರಿಕೊಳ್ಳುವ ಆ ರೋಗದ ಅವಸ್ಥೆಗೇ! ಆತುರದಲ್ಲಿ ಮಾತನಾಡುವಾಗ ಘಟಿಸುವ ಶಬ್ದಪಲ್ಲಟವೂ ಹೀಗೆಯೇ. ಪ್ರತಿಯೊಬ್ಬರಿಗೂ ಇಂತಹ ಸನ್ನಿವೇಶಗಳು ಬೇಡಬೇಡವೆಂದರೂ ಪ್ರಾಪ್ತಿಯಾಗುತ್ತಲೇ ಇರುತ್ತವೆ. ಆ ಸಂದರ್ಭದಲ್ಲಿ "ಮೊದಲಿನಿಂದ ನಗ

ದಿದ್ದ"ರೂ ಮುಗುಳ್ನಗೆಯನ್ನಾದರೂ ಬೀರದವನು ಹತಭಾಗ್ಯ. ತನ್ನ ಸ್ವಂತ ಚರ್ಯೆಯಲ್ಲಿ ಹಾಸ್ಯವನ್ನು ಕಂಡು ವಿನೋದಪಡುವವನು ನಿಜವಾದ ಭಾಗ್ಯಶಾಲಿ. ಏಕೆಂದರೆ ಅಂತಹವನು ಸಂಸಾರವನ್ನು ಗೆಲ್ಲುವನು; ಜಗತ್ತನ್ನು ಜಯಿಸಿ, ಸೋತವರ ಸ್ತುತಿಗೆ ಪಾತ್ರನಾಗುವನು.

ಗಾಂಧೀಜಿಯವರು ಮತ್ತೊಬ್ಬರಿಗೆ ನೋವನ್ನು ಕೊಡುವ ಹಾಸ್ಯವನ್ನೊಲ್ಲದವರೆಂಬ ಮಾತು ಖಂಡಿತನೆಂದೆಲ್ಲರೂ ಪ್ರಮಾಣಮಾಡಿ ಹೇಳಬಹುದು. ಅವರಲ್ಲಿ ಹಾಸ್ಯಪ್ರವೃತ್ತಿಯಿರುವುದಾದರೆ ಸೂಕ್ಷ್ಮವಾಗಿಯೂ ಇರಬೇಕು, ಉದಾರವಾಗಿಯೂ ಇರಬೇಕು. ವಾಸ್ತವವಾಗಿ ಅವರ ಹಾಸ್ಯದ ಕಳೆಯು ದಿವ್ಯವಾದುದು. ಹಾಸ್ಯದಲ್ಲಿಯೇ ಪಾಂಡಿತ್ಯವನ್ನು ಸಂಪಾದಿಸಿದವರಿಗೂ ದೊರಕದ ಲಾವಣ್ಯವು ಗಾಂಧೀಜಿಯವರ ಹಾಸ್ಯದಲ್ಲಿ ತಾನಾಗಿತಾನೇ ಶೋಭಿಸುವುದು.

ಗಾಂಧೀಜಿ ಬರೆದು ಅಚ್ಚಾಗಿರುವ ಗ್ರಂಥರಾಶಿ ಎಲ್ಲರಿಗೂ ಲಭ್ಯ. ಆ ರಾಶಿಯೆಲ್ಲವನ್ನೂ ಹುಡುಕಬೇಕಾದುದಿಲ್ಲ. ಸತ್ಯಶೋಧನೆಯನ್ನು ಹಿಡಿದು ಪುಟಗಳನ್ನು ತಿರುವುತ್ತಿದ್ದರೆ ಅಲ್ಲಲ್ಲಿ ಬರಹಗಾರನ ವಿನೋದ ಕಾಣುವುದು. ಲಂಡನ್ನಿನಲ್ಲಿ ಬ್ಯಾರಿಸ್ಟರ್ ಗುಂಪಿನ ಭೋಜನ ವೇಳೆಗಳಲ್ಲಿ ಈತನನ್ನು ಜತೆಯಲ್ಲಿ ಕುಳ್ಳಿರಿಸಿಕೊಳ್ಳಲು ನಾನುತಾನೆಂದು ಸಹಪಾಠಿಗಳಿಗೆ ಮದ್ಯದ ಆಸೆಯಿಂದ ಹುಟ್ಟಿದ ಇಷ್ಟಪ್ರೈಪೋಟಿಗಳಂತೆ. ಮುಖಲಕ್ಷಣಗಳನ್ನು ಅವಲೋಕಿಸಿದ ಮಾತ್ರದಿಂದಲೇ ಮನುಷ್ಯನ ಸ್ವಭಾವವನ್ನು ತಿಳಿಯುವ ಅಭ್ಯಾಸಕ್ಕಾಗಿ ಷೇಕ್ಸ್‌ಪಿಯರನ ತಸ್ವೀರನ್ನು ಚೆನ್ನಾಗಿ ಪರೀಕ್ಷಿಸಿ ಮನದಲ್ಲಿಟ್ಟುಕೊಂಡು ಲಂಡನ್ನಿನ ಬೀದಿಗಳಲ್ಲಿ ಹುಡುಕಿದಾಗ ಎಂತಹ ಷೇಕ್ಸ್‌ಪಿಯರುಗಳೂ ಕಾಣದಾದರಂತೆ. ಮುಂಬಯಿ ಹೈಕೋರ್ಟಿನಲ್ಲಿ ನ್ಯಾಯವಾದಿಗಳು ಸರ್ವಲಕ್ಷಣ ಸಂಪನ್ನವಾದ ನಿದ್ರೆಯನ್ನು ಅನುಭವಿಸುತ್ತಲಿದ್ದು ನಿದ್ದೆಮಾಡುವುದೇ ಗೌರವಪದ್ಧತಿಯಾಗಿದ್ದಾಗ ತಾವೂ ಶುಭ್ರವಾಗಿ ನಿದ್ರೆಗೈದು ಸುಖವನ್ನನುಭವಿಸುತ್ತಿದ್ದರಂತೆ. ಪತ್ನೀಪುತ್ರರೊಡಗೂಡಿ ಕಾಶೀಕ್ಷೇತ್ರದಲ್ಲಿ ಯಾತ್ರೆಗೆಂದು ಇಳಿದಾಗ ತಮ್ಮನ್ನಂಟಿದ

ಸತ್ಯಶೋಧನೆ

ಪುರೋಹಿತಪ್ರಾಣಿಯೊಡನೆ ಒಂದು ದಮ್ಮಿಡಿ ವ್ಯಾಪಾರಮಾಡಿದರಂತೆ. ಆ ದಮ್ಮಿಡಿಯ ಪ್ರಸಂಗದ ವಿನೋದವನ್ನು ಓದುತ್ತ ಅನುಭವಿಸಬೇಕು.

ಅಂತಹ ಪ್ರಸಂಗಗಳನ್ನೂ ಮಾತುಗಳನ್ನೂ ಸತ್ಯಶೋಧನೆಯೆಂಬ ಹೆಸರಿನ ಆತ್ಮಕಥೆಯಲ್ಲಿಯೇ ಕಾಣಲಾಗುವುದು. ಆ ನಾರಾಯಣ ಹೇಮಚಂದ್ರನ ವೃತ್ತಾಂತವನ್ನು ಉದಾಹರಣೆಯೆಂದು ಭಾವಿಸಿ ಓದ ಬಹುದು. ಆತ್ಮಕಥೆಯಲ್ಲಿ ಮಾತ್ರವೇ ಬರಹದ ಹಾಸ್ಯ ತೋರಿರಲು ಕಾರಣವನ್ನು ಹುಡುಕುತ್ತ ನಾವು ದೂರ ಹೋಗಬೇಕಾಗಿಲ್ಲ. ಸತ್ಯ ಶೋಧನೆಯ ಪ್ರತಿ ವಾಕ್ಯವೂ ಬೇರೆಡೆಗಳಲ್ಲಿನ ಗಾಂಧೀಜಿಯ ವಾಕ್ಯ ಗಳಷ್ಟೇ ಪ್ರಮಾಣ; ಆದರೆ ಆ ಗ್ರಂಥದ ಪ್ರತಿ ಪುಟವೂ ಮೃದುಮಧುರ ವಾದ ಸೊಬಗನ್ನು ಬೀರುತ್ತ ನಮ್ಮನ್ನು ಮಂದಹಾಸದ ಬೆಳದಿಂಗಳಿ ನಲ್ಲಿಯೇ ಅದ್ದುವುದು. ಬೇರೆಡೆಗಳಲ್ಲಿ ಸ್ವಂತ ವಿಷಯಕ್ಕೆ ಆಸ್ಪದ ಕಡಿಮೆ. ಆದ್ದರಿಂದ ವಾಕ್ಯಗಳು ಗಂಭೀರ; ಅತಿ ಸ್ಪಷ್ಟವಾದರೂ ಅತಿ ಸುಲಭವಾದರೂ ಗಂಭೀರ. ಸ್ವಂತ ವಿಷಯವನ್ನು ಮೂಲೆಯಲ್ಲಿಟ್ಟು ಚಿರಸ್ಥಾಯಿಯಾಗತಕ್ಕ ಮಾತುಗಳನ್ನು ಬರೆಯುವಾಗ ಸ್ವಭಾವತಃ ಅನ್ಯರಿಗೆ ಎಳ್ಳಷ್ಟಾದರೂ ನೋವನ್ನುಂಟುಮಾಡದಿರುವಾತನು ಹಾಸ್ಯ ವನ್ನು ತೋರಲಾದೀತೇ? ಸ್ವಂತ ಚರ್ಯೆಯನ್ನು ಸ್ಮರಿಸಿದಾಗ ಗಾಂಧೀ ಜಿಯ ಮನಸ್ಸಿನಲ್ಲಿ ಅನಿವಾರ್ಯವಾದ ಹಾಸ್ಯ ತೋರುವುದು ಸಹಜ. ವ್ಯರ್ಥಾಲಾಪಗಳನ್ನು ಗಡೀಪಾರುಮಾಡಿ ಸದಾ ಘನವಾದ ಉದ್ದೇಶ ವನ್ನೇ ದೃಷ್ಟಿಯಲ್ಲಿಟ್ಟುಕೊಂಡಿರುವಾತನ ಬರವಣಿಗೆಯಲ್ಲಿ ಹಾಸ್ಯರಸವು ಪ್ರಧಾನವಾಗಿರಲು ಹೇಗೆ ಸಾಧ್ಯ? ಸ್ವಂತ ವಿಷಯವನ್ನು ಬರೆದಾಗ ಆತನ ಹಾಸ್ಯವೃತ್ತಿಯನ್ನು ಕಾಣಬಹುದು; ಅದಕ್ಕಿಂತ ಮಿಗಿಲಾಗಿ ಸಾಮಾನ್ಯವೇಳೆಗಳ ಮಾತುಕಥೆಗಳಲ್ಲಿ ಕಾಣಬಹುದು.

ಅಹಮದಾಬಾದ್ ನಗರದಲ್ಲಿ ಕೋಟ್ಯಧೀಶರೆನಿಸಲು ಅರ್ಹರಾದ ಗಿರಣಿ ಮಾಲೀಕರುಂಟು. ಪ್ರಾಯಶಃ ಅವರೆಲ್ಲರೂ ಗಾಂಧೀಜಿಯವ ರನ್ನು ಮನೆದೇವರೆಂದು ಭಾವಿಸಿರತಕ್ಕವರು. ಬಂದ ಕಷ್ಟಗಳನ್ನೂ ತಮ್ಮ ವ್ಯವಹಾರದಲ್ಲಿ ಹುಟ್ಟಿದ ಕಿರುಕುಳಗಳನ್ನೂ ಪರಿಹರಿಸಿಕೊಳ್ಳಲು ಅವರು ಗಾಂಧೀಜಿ ಬಳಿಗೆ ಓಡುತ್ತಿರುತ್ತಾರೆ. ಜುಹುವಾಗಲಿ ನಂದೀದುರ್ಗ

ವಾಗಲಿ ಹಿಮವತ್ಕೇದಾರಕ್ಷೇತ್ರವಾಗಲಿ ಆ ಗಿರಣಿ ಮಾಲೀಕರು ತಮ್ಮ ಕಷ್ಟ ಪರಿಹಾರಕ್ಕಾಗಿ ಸ್ಪೆಷಲ್ ರೈಲುಗಳನ್ನಾದರೂ ಬಿಡಿಸಿಕೊಂಡು ಗಾಂಧೀಜಿ ಬಳಿ ಸಿದ್ಧರಾಗಿ ದರ್ಶನಕ್ಕಾಗಿ ಕಣ್ಣು ಕಣ್ಣು ಬಿಡುತ್ತಲಿರುತ್ತಾರೆ. ಒಂದು ಸಂದರ್ಭದಲ್ಲಿ ಬೆಂಗಳೂರಿನಲ್ಲಿಯೇ ಬಿಡಾರ ಮಾಡಿದ್ದಾಗ ಗಿರಣಿ ಮಾಲೀಕರ ತಂಡವೊಂದು ಬಂದು ಬೆಳಿಗ್ಗೆಯೆಲ್ಲ ತಮ್ಮ ವಿಚಾರವನ್ನು ಬಿಚ್ಚಿ ಹೇಳಿದರು. ಅದೇನು ಮಾಯವೋ ಎಂತೋ ಗಾಂಧೀಜಿ ಸ್ನಾನಕ್ಕೇಳುವ ವೇಳೆಗೆ ಅವರು ಹೊತ್ತು ತಂದಿದ್ದ ಜಟಿಲ ಸಮಸ್ಯೆಯು ಆತನ ಕನ್ನಡಕದೆದುರಿನಲ್ಲಿ ಕರಗಿ ಹೋಯಿತು. ಸ್ನಾನಕ್ಕೆಂದು ಗಾಂಧೀಜಿ ತುಂಡು ಬಟ್ಟೆಗಳನ್ನೆತ್ತಿಕೊಂಡೆದ್ದು ಬಚ್ಚಲಮನೆಕಡೆ ಹೆಜ್ಜೆಯಿಟ್ಟರು. ಆನಂದವನ್ನೂ ಭಕ್ತಿಯನ್ನೂ ಕಣ್ಣುಗಳಲ್ಲಿ ತೋರುತ್ತ ಗಿರಣಿ ಮಾಲೀಕರು ಹಿಂಬಾಲಿಸಿದರು. ಬಚ್ಚಲಮನೆಯ ಹೊಸ್ತಿಲಬಳಿ ನಿಲ್ಲಬೇಕಾಯಿತು. ಆ ವೇಳೆಗೆ ಮಾತುಕಥೆಗಳೆಲ್ಲ ಮುಗಿದೂ ಇದ್ದವು. ಇನ್ನು "ಬರುತ್ತೇವೆ" ಎನ್ನುತ್ತ ಹೊರಡಲನುಜ್ಞೆ ಬೇಡುವುದೊಂದೇ ಬಾಕಿ. ಆಗಲಾಮಾಲೀಕರಲ್ಲಿ ಮುಖಂಡನಾದಾತನು ನೆಲದಮೇಲೆ ದೀರ್ಘದಂಡವಾಗಿ ತನ್ನ ದೇಹವನ್ನಿಟ್ಟು ಉಷ್ಣೀಷವನ್ನು ಗಾಂಧೀಜಿಯ ಪಾದಗಳಿಗೆ ಸೋಕಿಸಿದನು. ಇತರರೂ ಅನುಕರಿಸಲು ಸಿದ್ಧರಾದರು. ಗಾಂಧೀಜಿ ಆಗಲೇನು ಹೇಳಬೇಕು? ಆಶೀರ್ವದಿಸಬೇಕೇ, 'ಅಚ್ಛಾ' ಎನ್ನಬೇಕೇ, 'ಹೀಗೇಕೆ ನಗುತ್ತೀರಿ?' ಎನ್ನುತ್ತ ತಾವೂ ಆರ್ದ್ರರಾಗಿ ಅಶ್ರುಜಲವನ್ನು ಕಾಣಿಸಿ ಎಲ್ಲರ ಹೃದಯಗಳನ್ನು ಹಿಂಡಬೇಕೇ? ಯಾವುದೂ ಇಲ್ಲ. ನಗುತ್ತ "ಬಸ್! ಬಸ್!" ಎಂದು ಬಾಯಿಂದ ಹೇಳುವುದು, ಪ್ರಣಾಮ ಮಾಡಿ ನೆಲದಿಂದೆದ್ದು ನಿಂತವರ ಬೆನ್ನಮೇಲೆ 'ಥಪ್ ಥಪ್' ಎನ್ನುವಂತೆ ಎಡಗೈಯಿಂದ ಅಪ್ಪಳಿಸುವುದು! ಅಳು ಬರಬಹುದಾಗಿದ್ದ ಸಂದರ್ಭದಲ್ಲಿ ಎಲ್ಲರಿಗೂ ನಗು ಬಂತು. ಅಲ್ಲಿದ್ದವರಿಗೆ ಬಾಯಲ್ಲಿ ನಗು, ಕಣ್ಣಿನಲ್ಲಿ ನೀರು.

ಥಪ್! ಥಪ್!

೧೯೨೧ರಲ್ಲಿ ಅಸ್ಸಾಂ ಪ್ರಾಂತದ ಸಂಚಾರ. ಆ ಪ್ರಾಂತವೆಲ್ಲ ಕಗ್ಗಾಡು; ನರಪ್ರಾಣಿಯ ಸುಳಿವನ್ನೇ ಕಾಣದೆ ನೂರಾರುಮೈಲಿ ದೂರ

ಕಳೆಯಬೇಕಾದುದು ಸಾಧಾರಣ. ಅಲ್ಲಿಯ ರೈಲುಗಳ ವಿತರಣೆಯನ್ನಂತೂ ಹೇಳಿತೀರದು. ಬೆಂಕಿಪೆಟ್ಟಿಗೆಗಳನ್ನು ಜೋಡಿಸಿ ಗುಡಗುಡನಾಟ ಬಿಟ್ಟಹಾಗೆ. ದಾರಿಯಾದರೋ ಬೆಟ್ಟ, ಡೊಗರು, ಕೊರಕಲು, ಏರುತಗ್ಗು, ಮಹದರಣ್ಯ. ಹೋಗುತ್ತಿದ್ದ ರೈಲುಗಳು ದಾರಿ ತಪ್ಪುವುದು ವಿಶೇಷವೇ ಅಲ್ಲ. ಹೋಗುತ್ತ ಹೋಗುತ್ತ ಹಿಂದಣ ಬಂಡಿಗಳು ಪತ್ತೆಯಿಲ್ಲದೆ ಕಳಚಿಕೊಂಡು ಹಿಂದೆಯೇ ನಿಲ್ಲುವುದುಂಟು;

ಅಸ್ಸಾಂ ರೈಲು

ಬಂದ ದಾರಿ ಇಳಿಜಾರಾಗಿದ್ದರೆ ಹಾಗೆಯೇ ಜಾರಿಕೊಂಡು ಹಿಮ್ಮುಖವಾಗಿ ಹುಚ್ಚು ಹಿಡಿದ ಭೂತದಂತೆ ಹೊರಟು ಹೋಗುತ್ತಿರುವುದೂ ಉಂಟು. ಆ ಬಂಡಿಗಳಲ್ಲಿ ಜನರೂ ಹೆಚ್ಚಾಗಿರುವುದಿಲ್ಲ. ಇಂತಹ ರೈಲೊಂದರಲ್ಲಿ ಆ ಮಹದರಣ್ಯದ ಕಣಿವೆ ಕಿಬ್ಬಿಗಳಲ್ಲಿ ಒಬ್ಬರೇ ಅನುಚರರೊಡನೆ ಗಾಂಧೀಜಿ ರಾತ್ರಿಯೆಲ್ಲ ಪ್ರಯಾಣಮಾಡುತ್ತಿದ್ದ ಸನ್ನಿವೇಶ. ರೈಲನ್ನು ಹತ್ತಿ ಹೊರಟದ್ದಾಯಿತು. ಮಾರ್ಗದಲ್ಲಿ ಚಿಕ್ಕ ಚಿಕ್ಕ ಸ್ಟೇಷನ್ನುಗಳು; ಇಳಿಯುವವರಾಗಲಿ ಹತ್ತುವವರಾಗಲಿ ಇಲ್ಲ. ನಿಶಿರಾತ್ರಿಯು ಸಮೀಪವಾಗುತ್ತ ಎಲ್ಲರಿಗೂ ನಿದ್ದೆ ಹತ್ತುವ ವೇಳೆ. ಗಾಂಧೀಜಿಯವರೊಂದು ಬಂಡಿಯಲ್ಲಿ ಮಲಗಿದ್ದರು; ದಿನವೆಲ್ಲ ಶ್ರಮಪಟ್ಟು ಬಸವಳಿದಿದ್ದ ಅನುಚರ ಕೃಷ್ಣದಾಸನು ಇನ್ನೊಂದು ಗಾಡಿಯಲ್ಲಿ ನಿದ್ರೆಮಾಡಲನುವಾದನು.

ನಿರ್ಜನಪ್ರದೇಶ; ಎರಡು ಕಡೆಗಳಲ್ಲಿಯೂ ಘೋರಾರಣ್ಯ. ರಾತ್ರಿ ೧೧-೧೨ ಗಂಟೆ ಸಮಯ. ರೈಲು ಹೋಗುತ್ತಿದ್ದ ಹಾಗೆ ರೈಲಿಗೇ ಸಿಡಿಲು ಬಡಿದಂತೆ ಶಬ್ದವಾಯಿತು. ಏನೆಂದು ವಿಚಾರಿಸಿದಾಗ ಎಂಜಿನ್ನಿನ ಮುಂದುಗಡೆಗೆ ಎರಡು ಗಾಡಿಗಳು ಸಿಕ್ಕಿ ಢಿಕ್ಕಿ! ಹಿಂದೆ ಆ ದಾರಿಯಲ್ಲಿ ಹೋಗಿದ್ದ ರೈಲು ಆ ಎರಡು ಗಾಡಿಗಳನ್ನು ತನ್ನ ಬಾಲದಿಂದ ಕಳಚಿಬಿಟ್ಟಿತ್ತು. ಇನ್ನೇನು ಮಾಡುವುದು? ಮುಂದಿನ ಎರಡು ಗಾಡಿಗಳನ್ನು ತಳ್ಳುತ್ತಲೂ ಹಿಂದಿನ ಐದಾರು ಗಾಡಿಗಳನ್ನು ಎಳೆಯುತ್ತಲೂ ಎಂಜಿನ್ ಸಾಹಸಗೊಂಡು ಮತ್ತೆ ಹೊರಟಿತು. ಸಂಗತಿಯೇನೆಂದು ತವಕಪಟ್ಟು ಇಳಿದಿದ್ದ ಪ್ರಯಾಣಿಕರು ಸ್ಥಿತಿಯನ್ನು ತಿಳಿದಮೇಲೆ

ನಗುತ್ತ ಪುನಃ ಹತ್ತಿ ತಮ್ಮ ಸ್ಥಾನಗಳಲ್ಲಿ ಯಥಾಪೂರ್ವ ಮಲಗಿದರು. ಹತ್ತಿಪ್ಪತ್ತು ಮೈಲಿ ಕಳೆಯುವುದರಲ್ಲಿ ಎಲ್ಲರೂ ನಿದ್ರಾವಶರಾದರು.

ಮುಂದೆ ೬೦-೭೦ ಮೈಲಿ ದೂರ ಕಳೆಯಿತು. ರಾತ್ರಿ ೩ ಗಂಟೆಯ ಸಮಯ. ಕೃಷ್ಣದಾಸನಿಗೆ ಹಿಡಿದಿದ್ದ ನಿದ್ದೆ ತಪ್ಪಿ ಎಚ್ಚರವಾಯಿತು. ಕಣ್ಣುಬಿಟ್ಟು ನೋಡಿದರೆ ಯಾವುದೋ ಒಂದು ಚಿಕ್ಕ ಸ್ಟೇಷನ್; ಜನರು ಮಾತ್ರ ಇಳಿದು ಓಡಾಡುತ್ತ ಕೂಗಾಡುತ್ತಲಿದಾರೆ. ಏನು ವಿಶೇಷ ವೆಂದಿಳಿದು ವಿಚಾರಿಸಿದರೆ ಮರ್ಮಾಹತವಾದ ಸುದ್ದಿ! ಗಾಂಧೀಜಿ ಮಲ ಗಿದ್ದ ಗಾಡಿಯು ಪತ್ತೆಯೇ ಇಲ್ಲ! ಹಿಂದಿದ್ದ ಆ ಗಾಡಿ ರಾತ್ರಿಯ ಯಾವ ವೇಳೆಯಲ್ಲಿಯೋ ಕಗ್ಗಾಡಿನ ಯಾವೆಡೆಯಲ್ಲಿಯೋ ಕಳಚಿಕೊಂಡು ಹಿಂದೆ ಮಾಯವಾಗಿತ್ತು. ಎಲ್ಲರಿಗೂ ಗಾಬರಿ. ಕಿಂಕರ್ತವ್ಯವೆಂದು ಅಧಿ ಕಾರಿಗಳು ತಮ್ಮಲ್ಲಿ ಆಲೋಚಿಸಿದ ಬಳಿಕ ರೈಲು ಹಿಂದಕ್ಕೆ ಹೊರಟು ತಪ್ಪಿಸಿಕೊಂಡ ಗಾಡಿಯನ್ನು ಹುಡುಕಿ ಸಿಕ್ಕಿದಾಗ ತಗಲಿಸಿಕೊಂಡು ಪುನಃ ಯಥಾಪ್ರಕಾರ ಹೊರಡತಕ್ಕದ್ದೆಂದು ನಿರ್ಧರಿಸಿದರು. ರೈಲು ಹಿಂದಕ್ಕೆ ಹೊರಟಿತು. ಎಲ್ಲರಿಗೂ ಚಿಂತೆ; ಕೃಷ್ಣದಾಸನಿಗಂತೂ ಅಪಾರ ವಾದ ಕಳವಳ. "ಮಹದರಣ್ಯ ಮಧ್ಯದಲ್ಲಿ ಒಂದು ಮುರುಕು ಗಾಡಿ, ಅದರಲ್ಲಿ ಅಸಹಾಯರಾಗಿ ಗಾಂಧೀಜಿ ಮೈಮರೆತು ನಿದ್ದೆಮಾಡುತ್ತಿರು ವುದು! ಅವರ ಬೆಂಗಾವಲಿಗೂ ಉಪಚರ್ಯೆಗೂ ಭೃತ್ಯನಂತೆ ನಾನಿದ್ದು ಏನು ಮಾಡಿದ ಹಾಗಾಯಿತು! ನಿಶಿರಾತ್ರಿಯಲ್ಲಿ ಸದ್ದಿಲ್ಲದೆ ಸುಳಿದಾಡು ತ್ತಿರಬಹುದಾದ ಹುಲಿಯೋ ಚಿರತೆಯೋ ನರಮಾಂಸದ ವಾಸನೆಯನ್ನು ತಿಳಿದರೆ ಏನು ತಾನೇ ನಡೆದಿರಲಾರದು! ಎಂತಹ ಜೀವವದು! ಆ ಒಂದು ಪ್ರಾಣಕ್ಕೆ ಅಪಾಯ ನೋಕದಂತೆ ನಡೆಸಲಾಗದಾಯಿತೇ! ಭಗವಂತನೇ ಕಾಪಾಡಬೇಕು!"

ಅರ್ಧ ಗಂಟೆ ಕಾಲವನ್ನು ಚಿಂತಾವಿಹ್ವಲರಾಗಿ ಕಳೆಯುವ ವೇಳೆಗೆ ರೈಲಿನ ಬಾಲಕ್ಕೆ (ಅಥವಾ ತಲೆಗೆ) ಥಿಕ್ಕಿಯಾಯಿತು! ಗಾಡಿ ಸಿಕ್ಕಿತು! ರೈಲು ನಿಂತು ಸುದಾರಿಸಿಕೊಂಡಿತು. ಎಲ್ಲರೂ ಇಳಿದು ಆ ಗಾಡಿಯ ಕಡೆ ಹೊರಟರು. ಎಲ್ಲರ ಮುಂದೆ ಕೈಯಲ್ಲಿ ಪ್ರಾಣಹಿಡಿದು ಕಷ್ಟ ದಿಂದ ಅಳುವನ್ನು ತಡೆದುಕೊಂಡು ಕೃಷ್ಣದಾಸನು. ಆ ಗಾಡಿಯ

ಕಿಟಕಿಯಲ್ಲಿಯೇ ಕಂಡಿತು ಗಾಂಧೀಜಿಯ ಮುಖ. ಗಹಗಹನೆ ನಗುತ್ತಲಿದ್ದಾರೆ! "ಹಿಂದಿನಿಂದ ರೈಲು ಬಂದು ನನ್ನ ಗಾಡಿಯನ್ನು ಮುಂದೆ ನೂಕುವುದೆಂದು ನಿರೀಕ್ಷಿಸುತ್ತಿದ್ದೆ. ನೀವೇ ಬಂದಿರಿ" ಎನ್ನುತ್ತಾರೆ! ಚಿಂತಾಭಯಗಳಿಂದ ದಿಗ್ಭ್ರಾಂತನಾಗಿದ್ದ ಕೃಷ್ಣದಾಸನಿಗೆ ಚೇತರಿಸಿಕೊಂಡು ನಗುವುದೇ ಕಷ್ಟವಾಯಿತು. "ಎಷ್ಟು ನಿರ್ಭೀತಿ ಈತನದು, ಎಂತಹ ಚಿತ್ತಸ್ಥೈರ್ಯ ಈತನದು!" ಎಂದುಕೊಳ್ಳುತ್ತ ಮೂಢನಾದನು.

ಏಳುತಿಂಗಳ ವೃತ್ತಾಂತವನ್ನು ಎರಡು ಸಂಪುಟಗಳಲ್ಲಿ ಬರೆದಿರತಕ್ಕ ಕೃಷ್ಣದಾಸನ ಗ್ರಂಥದಲ್ಲಿ ಈ ವೃತ್ತಾಂತದೊಂದಿಗೆ ಸ್ವಾರಸ್ಯವಾದ ಇತರ ವೃತ್ತಾಂತಗಳನ್ನೂ ಗಮನಿಸಬಹುದು. ೧೯೨೧ರಲ್ಲಿ ಮಹತ್ತರವಾದ ಆಂದೋಲನ ದೇಶದಲ್ಲಿ ನಡೆಯಿತು. ಗಾಂಧೀಜಿ ಹೋದೆಡೆಯಲ್ಲೆಲ್ಲ ಸಾವಿರಗಟ್ಟಲೆ ಜನರ ಸಂದಣಿ. ಮೈದಾನದ ವಿರಾಟ್ಸಭೆಗಳು! ನಿರ್ದಿಷ್ಟ ವೇಳೆಗೆ ಗಾಂಧೀಜಿ ಬಂದಾಗ ವೇದಿಕೆಯನ್ನು ಸೇರಿಕೊಳ್ಳಲು ದಾರಿಯೇ ಇಲ್ಲ. ನೂಕುನುಗ್ಗಾಟವಿಲ್ಲದೆ ಸಭೆಯಲ್ಲಿ ಕ್ರಮವಾಗಿ ಕುಳಿತುಕೊಳ್ಳುವ ಅಭ್ಯಾಸ ಜನರಿಗಿನ್ನೂ ಬಂದಿಲ್ಲ. ಗಾಂಧೀಜಿಯವರಿಗೆ ದಾರಿ ಬಿಟ್ಟರೂ ಅವರ ಪಕ್ಕಗಳಲ್ಲಿಯೂ ಹಿಂದೆಯೂ ಜನರು ತಳ್ಳುವುದೂ ನುಗ್ಗುವುದೂ ಒದ್ದಾಡುವುದೂ ಸಮರಸಂಭ್ರಮದಿಂದಲೇ! ಗಾಂಧೀಜಿಯ ಹಿಂದಿರುವುದು ಕೃಷ್ಣದಾಸನಿಗೆ ಅಸಾಧ್ಯವಾಗಿಹೋಯಿತು. ಇದನ್ನು ಕಂಡು ಮುಗುಳ್ನಗೆಗೂಡಿ ಗಾಂಧೀಜಿ "ಕೃಷ್ಣದಾಸ್! ನನ್ನ ಬೆನ್ನಿಗಂಟಿಕೊಂಡಿದ್ದರೆ ನಿನಗೆ ಕ್ಷೇಮ. ಸ್ವಲ್ಪ ಸಂದು ಬಿಟ್ಟರೂ ನೀನು ಅಪ್ಪಚ್ಚಿಯಾಗುವಿ" ಎಂದು ವಾತ್ಸಲ್ಯದಿಂದ ನುಡಿದು ಪಕ್ಕದಲ್ಲಿದ್ದ ಮಿತ್ರರೊಡನೆ "ನನ್ನ ಬಳಿಕ ಬರುವುದು ಪ್ರಳಯ!" ಎಂದು ಹಾಸ್ಯಮಾಡಿದರು. ಇಂಗ್ಲಿಷಿನಲ್ಲಿ ಹೇಳಿದ "After me the Deluge" ಎಂಬ ಆ ಮಾತು ವಿಸ್ಮಯದ ಅಲಂಕಾರದಿಂದ ತುಂಬಿದ್ದು.

ನನ್ನ ಬಳಿಕ ಪ್ರಳಯ!

ಸುಮ್ಮನಿರುವುದು ಸಾಧ್ಯವಿಲ್ಲ; ಕ್ಷಣಕಾಲವಾದರೂ ಪುರಸತ್ತಿಲ್ಲ. ವಿರಾಮಕಾಲವೆಂಬುದೇ ಇಲ್ಲ. ಉದ್ದೇಶರಹಿತವಾದ ಮಾತುಕಥೆ

ಯಾಗಲಿ ಚರ್ಯೆಯಾಗಲಿ ತೋರದಿರುವಂತಹ ಜೀವನ. ಕೆಲಸಕ್ಕೆ ಬಾರದ ಮಾತನ್ನಾಡಿಕೊಂಡು ಹಾಯಾಗಿ ಕಾಲುಚಾಚಿ ಹೊತ್ತುಕಳೆವುದೆನ್ನುವುದಂತೂ ಗಾಂಧೀಜಿಯ ಕನಸಿನಲ್ಲಿಯೂ ಪ್ರವೇಶಿಸಲಾರದೋ ಏನೋ! ಶಾಂತಿಪೂರಿತವೂ ನಿರ್ದುಷ್ಟವೂ ಸಾರ್ಥಕವೂ ಆದ ದಿನಚರಿಯಲ್ಲಿ ಹಾಸ್ಯ ವಿನೋದಗಳಿಗೆ ಎಡೆಯೆಲ್ಲಿ? ಆದರೆ ಸ್ವಂತ ಚರ್ಯೆಯನ್ನು ಕಂಡು ನಕ್ಕು ಹಾಸ್ಯವನ್ನನುಭವಿಸುವ ಚಟುಲಚಪಲತೆಯ ಚಿತ್ತವೃತ್ತಿ ಗಾಂಧೀಜಿಯದು. ಲೀಲಾವಿನೋದಿಯು ತನ್ನ ಲೀಲೆಯನ್ನು ಕಂಡು ತಾನೇ ನಕ್ಕಹಾಗೆ.

ಗಾಂಧೀಜಿಯ ದಿನಚರ್ಯೆಯ ಕ್ರಮವನ್ನು ತಿಳಿಯದವರಾರು? ಸಂಜೆ ಪ್ರಾರ್ಥನೆಗೆ ಮೊದಲು ಸ್ವಲ್ಪ ದೂರ ಕಾಲ್ನಡಿಗೆಯ ವ್ಯಾಯಾಮವಾಗಬೇಕು. ಎಲ್ಲಿ ಕಾಲಿಟ್ಟರಲ್ಲಿ ಸಾವಿರಾರು ಜನ "ದರ್ಶನ್ ಹೋನಾ" ಎಂದು ಮುತ್ತಿಕೊಳ್ಳುವಾಗ ನಿರಾತಂಕವಾಗಿ ಹೆಜ್ಜೆಯನ್ನಿಟ್ಟು ಕಾಲ್ನಡೆ ತೀರಿಸಲು ಒಂದೆರಡು ಮೈಲಿ ದೂರ ದಾರಿಯಾದರೂ ಸಿಕ್ಕುವುದು ಹೇಗೆ? ಪ್ರತಿಕ್ಷಣವೂ ಪ್ರತಿದಿಕ್ಕಿನಿಂದಲೂ ಸಾವಿರಾರು ಕಣ್ಣುಗಳು ಏಕಪ್ರಕಾರವಾದ ದೃಷ್ಟಿಯನ್ನು ತಮ್ಮ ಮೇಲೆ ಬೀರುತ್ತಿದ್ದರೆ ನಿಶ್ಚಿಂತರಾಗಿರುವುದು ಹೇಗೆ? ಹಸಿಮೇಲೊಂದೆರಡು ಗಂಟೆಗಳಕಾಲ ತಳಮಳಿಸದಿರುವುದೇ ಸಾಮಾನ್ಯರಿಗೆ ಸಾಧ್ಯವಿಲ್ಲ; ಕಡೆಗೆ ಫೋಟೋ ತೆಗೆಯುವವನೆದುರಿನಲ್ಲಿ ಒಂದು ಕ್ಷಣಕಾಲ ಮೋರೆಯ ಬಣ್ಣ ಬದಲಾಯಿಸದಿರುವುದು ಅನೇಕರಿಗೆ ಕಷ್ಟ. ಗಾಂಧೀಜಿಯವರ ಪರೀಕ್ಷೆ ಮಾನವ ಪ್ರಾಣಿಗೆ ಸಾಧ್ಯವಾದೀತೇ! ಆ ಪರೀಕ್ಷೆಗೆ ಸಿದ್ಧರಾಗುವ ಸಾಹಸಿಗಳು ಮೊದಲು ಹುಚ್ಚರಾಸ್ಪತ್ರೆಯಲ್ಲಿ ಕೊಟಡಿಯನ್ನು ಗೊತ್ತುಮಾಡಿಟ್ಟುಕೊಂಡು ಆಮೇಲೆ ಪರೀಕ್ಷೆಗೆ ನಿಲ್ಲುವುದು ಅವರಿಗೂ ಇತರರಿಗೂ ಕ್ಷೇಮ. ಅನೇಕ ವೇಳೆ ಗಾಂಧೀಜಿ ಮೋಟಾರಿನಲ್ಲಿ ಕುಳಿತು ಊರ ಹೊರಗೆ ಹೊರಟು ನಿರ್ಜನವಾದೆಡೆಯಲ್ಲಿ ತಮ್ಮ ನಡಿಗೆಯನ್ನು ಮುಗಿಸಿ ಹಿಂದಿರುಗುವರು. ಕೆಲವೇಳೆ ಅದೂ ಸಾಧ್ಯವಿಲ್ಲ. ಅಂತಹ ಸಮಯಗಳಲ್ಲಿ ಏನುಮಾಡುವುದು? ಕುಳಿತಿರುವ ಸಾವಿರಾರು ಜನರ ನಡುವೆ ಶತಪಥ ತುಳಿಯುವುದಕ್ಕೆ ಒಂದು ಓಣಿ

ಶತಪಥ

ಯನ್ನು ಬಿಡಿಸಿಕೊಂಡು ಅಲ್ಲಿ ಹಿಂದಕ್ಕೂ ಮುಂದಕ್ಕೂ ಹೆಜ್ಜೆ ಹಾಕಿ ತಮ್ಮ ನಡಿಗೆಯ ವ್ಯಾಯಾಮವನ್ನು ನಡೆಸುವುದು! ಸುತ್ತಲೂ ಮೌನ ದಿಂದ ಎವೆಯಿಕ್ಕದೆ ಜನರು ನೋಡುತ್ತಿರುವುದು; ಮಧ್ಯೆ ಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ ಪದಚಾರಣ ನಡೆಯುತ್ತಿರುವುದು. ಅಂತಹ ಸಮಯ ದಲ್ಲಿ "ಇದೊಂದು ವಿಚಿತ್ರ ವಿನೋದ"ವೆಂದೇ ಅವರ ಮನಸ್ಸಿನಲ್ಲಿ ತೋರಿ ತಮ್ಮ ಚರ್ಯೆಗಾಗಿ ತಮಗೇ ನಗುಬರುತ್ತಲಿರುವ ಅವಸ್ಥೆ ತುಂಬಿ ತುಳುಕುತ್ತಿರುವುದು.

೧೯೨೪ರಲ್ಲಿ ಪುಣೆಯ ಸಸ್ಸೂನ್ ಆಸ್ಪತ್ರೆಯಲ್ಲಿ ರುಗ್ಣಾವಸ್ಥೆಯಲ್ಲಿ ಗಾಂಧೀಜಿ ಹಾಸಿಗೆ ಹಿಡಿದಿದ್ದಾಗ ಜಗತ್ತೇ ಪ್ರಾಣವನ್ನು ಕಯ್ಯಲ್ಲಿ ಹಿಡಿದು ನಿರೀಕ್ಷಿಸುತ್ತಿದ್ದ ಸಮಯ. ಶಸ್ತ್ರಚಿಕಿತ್ಸೆಯಾಯಿತು; ಗಾಯವೂ ಆರುತ್ತ ಬಂತು. ಆಗ ತೀರ್ಥಯಾತ್ರೆಗೆಯ್ದುಂತೆ ಊರೂರುಗಳಿಂದ ಬಂದ ಆಪ್ತೇಷ್ಟರಿಗೆ ಹಾಸಿಗೆಯಲ್ಲಿ ಮಲಗಿದ್ದ ಪ್ರಾತಸ್ಮರಣೀಯ ವ್ಯಕ್ತಿಯನ್ನು ಸ್ಮರಿಸಿದ ಮಾತ್ರದಿಂದ ಕಣ್ಣೀರು ತುಂಬಿ ಅಳು ಬರುತ್ತಿತ್ತು. ಪಂಡಿತ ಮದನಮೋಹನ ಮಾಲವೀಯರಂತಹವರಿಗೆ ಅಶ್ರುಧಾರೆಯನ್ನು ತಡೆಯಲು ಸಾಧ್ಯವಾಗ ಲಿಲ್ಲ. ಆ ಸಂದರ್ಭದಲ್ಲಿ ಹಾಸ್ಯಮಾಡಿ ನಕ್ಕು ನಗಿಸಲು ಯಾರಿಗೆ ಸಾಧ್ಯ? ಕಿಬ್ಬೊಟ್ಟೆಯಲ್ಲಿ ಗಾಯವಾದುದರಿಂದ ಗಾಂಧೀಜಿಗೆ ಎದ್ದು ಕುಳಿತುಕೊಳ್ಳಲು ಕೈಲಾಗದು, ನಗುವುದಕ್ಕೂ ಶಕ್ತಿ ಸಾಲದು. ಬೆಳಿಗ್ಗೆ ಹಾಸಿಗೆಯಮೇಲಿದ್ದು ಕುಳಿತುಕೊಳ್ಳಬಹುದಾದಾಗ ಅವರ ಪ್ರಯಾಸ ತಗ್ಗುವಂತೆ ಹಿಡಿದುಕೊಂಡೆದ್ದು ಕುಳಿತುಕೊಳ್ಳಲು ಒಂದು ಹಗ್ಗವನ್ನು ಮಂಚದಮೇಲಿಸಿಂದ ಕಟ್ಟಿತ್ತು. ಆ ಹಗ್ಗವನ್ನು ಹಿಡಿದೇಳುತ್ತ ಸುತ್ತಲ ವರನ್ನು ಕಂಡು ಕಿರುನಗೆ ತೋರುತ್ತ "ಇದು ನನ್ನ ಪ್ರಾತಸ್ಮರಣೀಯಾಮ!" ಎನ್ನುವ ಜೀವಿಯ ಮನಸ್ಸಿನಲ್ಲಿ ಆಗಲೂ ನಗುವೇ.

ಎರಡನೆ ಬಾರಿ ಚಕ್ರಗೋಷ್ಠಿ ನೆರೆದಾಗ ಗಾಂಧೀಜಿ ಇಂಗ್ಲೆಂಡಿಗೆ ಪ್ರಯಾಣ ಮಾಡಿದರಷ್ಟೆ! ಆ ದೇಶಕ್ಕೆ ಹೊರಡುವಾಗಲೂ ಯಥಾ ಪೂರ್ವದ ವಸ್ತ್ರಧಾರಣೆಯೇ. ಮೊಳಕಾಲಮೇಲಿನವರೆಗೆ ಪಂಚೆ, ಬರಿಯ ಮೈ; ಹೊದ್ದರೊಂದು ಬಿಳಿ ಶಾಲು. ಆ ಪಂಚೆಯೂ ಪಂಚೆಯಲ್ಲ.

ಮಿತವ್ಯಯರೀತಿಯಲ್ಲಿ ಹೊಸಹೊಸ ಉಪಾಯಗಳನ್ನು ಹುಡುಕುವ ಜಾಣತನ ಗಾಂಧೀಜಿಯವರಲ್ಲಿದ್ದಂತೆ ಮತ್ತಾರಲ್ಲುಂಟು ಲೋಕದಲ್ಲಿ? ಪಂಚೆಯನ್ನುಡುವಾಗ ಕೆಳಗೆ ಬೀಳುವ ಅಂಚಿನ ಉದ್ದ ಸೊಂಟಕ್ಕೆ ಸುತ್ತುವ ಅಂಚಿಗೆ ಬೇಕಾಗಿರುವುದಿಲ್ಲ. ಅನವಶ್ಯವಾದ ಉದ್ದವನ್ನು ಪೊಕ್ಕಳ ಬಳಿ ಜೋಡಿಸಿ ನೆರಿಗೆಯಾಗಿ ರಚಿಸಿ ಅಲಂಕಾರವೆಂದು ಸಾಮಾನ್ಯವಾಗಿ ಭಾವಿಸುವುದು ಅದರಿಂದಲೇ. ಸೊಂಟಕ್ಕೆ ಬೇಡದ ಉದ್ದವನ್ನು ಏತಕ್ಕಿಟ್ಟುಕೊಳ್ಳಬೇಕು? ಒಂದು ಕಡೆ ನಾಲಕ್ಕು ಮೊಳ, ಮತ್ತೊಂದು ಕಡೆ ಎರಡೂವರೆ ಮೊಳ ಬರುವಂತೆ ಮೂಲೆಮೂಲೆಯಾಗಿ ಕತ್ತರಿಸಿಕೊಂಡು

**ಗಾಂಧೀ ಫ್ಯಾಷನ್**

ಎರಡೂವರೆಮೊಳದಂಚನ್ನು ಸೊಂಟಕ್ಕೆ ಸುತ್ತಿಕೊಳ್ಳುವುದು, ನಾಲಕ್ಕು ಮೊಳದಂಚನ್ನು ಬೈಸಿಕಲ್ ಸವಾರರುಟ್ಟಂತೆ ಎರಡು ಕಚ್ಚೆಯಾಗಿ ಉಡುವುದು. ಹದಿನಾಲ್ಕು ಮೊಳದ ಬಟ್ಟೆಯಲ್ಲಿ ನಾಲಕ್ಕು ಪಂಚೆಗಳಲ್ಲದೆ ಒಂದು ಜತೆ ಕೈ ಚೌಕಗಳು ಕೂಡ ಆದ ಹಾಗಾಯಿತು. ಇದು ಗಾಂಧೀ ಫ್ಯಾಷನ್. ಇಂತಹ ಅಲಂಕಾರವಿಶಿಷ್ಟರನ್ನು ಪ್ಯಾರಿಸ್ ಲಂಡನ್ ನಗರಗಳ ಪ್ರಮುಖರು ಆದರದಿಂದ ಎದುರುಗೊಂಡರು. ರಾಜಸಭೆಗಳಲ್ಲಿಯೂ ಪಾರ್ಲಿಮೆಂಟ್ ಸಭಿಕರ ಗೋಷ್ಠಿಗಳಲ್ಲಿಯೂ ಬರಮಾಡಿಕೊಂಡರು. ಇಂತಹ ವಿಚಿತ್ರವ್ಯಕ್ತಿಯನ್ನು ಕಣ್ಣಾರೆ ಕಂಡು ಹಸ್ತಲಾಘವ ಕೊಡುವಾಗ ಅಲ್ಲಿಯ ಜನರ ಮನಸ್ಸುಗಳಲ್ಲಿ ವಿಸ್ಮಯಾಶ್ಚರ್ಯಗಳು ಉಕ್ಕಿ ತೋರುವುದು ಸಹಜವಾಗಿತ್ತು. ಆಗ ಹೊರಟಿತು ಗಾಂಧೀಜಿಯವರಿಂದ ಒಂದು ಹಾಸ್ಯೋಕ್ತಿ; ಗಹಗಹಿಸಿ ನಗುವ ಮಾತು. ಅದನ್ನು ತಿಳಿಯಲು ಬೇರೊಂದಲಂಕಾರ ವೈಖರಿಯ ವೃತ್ತಾಂತವನ್ನು ತಿಳಿದಿರಬೇಕು.

ಗಾಲ್ಫ್ ಎಂಬ ಆಟ ಇಂಗ್ಲಿಷರಿಗಿಷ್ಟ. ರಾಜಪುರುಷರು, ಶ್ರೀಮಂತರು, ಸಾಮಂತರು, ಸ್ತ್ರೀಯರು ಎಲ್ಲರೂ ಆಡುವ ಆಟ. ಅದನ್ನಾಡಲು ಮೊದಮೊದಲು ಆಟಗಾರರು ಕುದುರೆ ಸವಾರಿಗೆಂದು ಗೊತ್ತಾದ ಬ್ರೀಚಿಸ್ ಎಂಬ ಷರಾಯನ್ನು ಧರಿಸುತ್ತಿದ್ದರು. ಬ್ರೀಚಿಸೆಂಬುವರಲ್ಲಿ ಮೊಣಕಾಲಿನವರೆಗೆ ಬಿಗಿಯಾಗಿ ಮೈಗಂಟಿಕೊಂಡಂತೆಯೂ ಮೊಣಕಾಲಮೇಲೆ ಸೊಂಟದ ವರೆಗೆ ಡಗಲೆಯಂತೆಯೂ ಇರುವುದು.

ಗಾಲ್ಫ್ ಆಟದಲ್ಲಿ ನಡಿಗೆಯುಂಟು; ಈ ಬ್ರೀಚಿಸ್ ಆ ನಡಿಗೆಗನು ಕೂಲವಿಲ್ಲ. ಆದಕಾರಣ ಬ್ರಿಟಿಷ್ ಯುವರಾಜರಾಗಿದ್ದ ಎಡ್ವರ್ಡ್ ರಾಜಕುಮಾರರು (ಈಗಿನ ವಿಂಡ್ಸರ್ ಡ್ಯೂಕರು) ಒಂದುಪಾಯವನ್ನು ಬಗೆದರು. ಏನಂದರೆ ಮೊಣಕಾಲ್ಚಿಪ್ಪಿನ ಮೇಲಿನಿಂದ ಮೊದಲಾಗುವ ಡಗಲೆಯನ್ನು ಚಿಪ್ಪಿನ ಕೆಳಗಡೆಯೇ ಮೊದಲಿಡುವುದು.

**ಪ್ಲಸ್ ಫೋರ್ಸ್**

ಡಗಲೆಗೆ ನಾಲ್ಕಂಗಲ ಹೆಚ್ಚಾಗಿ ನೇರಿದಂತಾಗಿ ಮೊಣಕಾಲನ್ನಾಡಿಸಲು ಸಾಕಾದಷ್ಟು ಸಡಿಲವುಂಟಾಯಿತು. ಈ ಬಗೆಯ ಷರಾಯನ್ನು ಪ್ಲಸ್ ಫೋರ್ಸ್ (plus fours) ಎಂಬುದಾಗಿ ಕರೆದರು. ಯುವರಾಜರೇ ಖುದ್ದಾಗಿ ತೊಟ್ಟ ಕಾರಣ ಎಲ್ಲರಲ್ಲಿಯೂ ಅದೇ ಒಯ್ಯಾರವಾಗಿ ಹೋಯಿತು. ಇಂಗ್ಲಂಡಿನಲ್ಲಿ ಹುಟ್ಟಿದ ಈ ಬಿನ್ನಾಣವು ಬ್ರಿಟಿಷ್ ಜಾತಿಯವರಿರುವೆಡೆಗಳಲ್ಲೆಲ್ಲ ಸಾಮಾನ್ಯವಾಗಿ ಹೋಯಿತು.

ಗಾಂಧೀಜಿಯವರು ಇಂಗ್ಲಂಡನ್ನು ಸಮೀಪಿಸುತ್ತಲಿದ್ದ ಹಾಗೆಯೇ ಅವರನ್ನು ಎದುರುಗೊಳ್ಳಲು ಅಲ್ಲಿಯ ಸದ್ಗೃಹಸ್ಥರು ಕಾಣಿಸಿಕೊಂಡು ಸ್ವಾಗತವನ್ನು ನೀಡಿದರು. ಆಗ ತಮ್ಮ ಸ್ವಂತ

**ಮೈನಸ್ ಫೋರ್ಸ್!**

ವಸ್ತ್ರ ಧಾರಣೆಯ ವಿತರಣೆಯನ್ನು ಕಂಡು ಅವರ ಮನಸ್ಸಿನಲ್ಲಿ ವಿಸ್ಮಯ ತೋರಿರಬಹುದೆಂದೂಹಿಸಿ ಗಾಂಧೀಜಿ "ನಿಮ್ಮ ದೇಶದಲ್ಲಿ ನೀವು ಪ್ಲಸ್ ಫೋರ್ಸ್ ಧರಿಸುತ್ತೀರಿ. ನಾನು ಮೈನಸ್ ಫೋರ್ಸ್ ಧರಿಸಿದ್ದೇನೆ!" ಎಂದು ತಾವೂ ನಕ್ಕು ಅವರನ್ನೂ ನಗಿಸಿದರು.

ಸ್ವಂತ ಚರ್ಯೆಯನ್ನು ಕಂಡು ತಾವೂ ನಕ್ಕು ಇತರರನ್ನೂ ನಗಿಸುವುದು ಹದಿನಾರಾಣೆ ಚಿತ್ತಸ್ವಾಸ್ಥ್ಯವಿದ್ದವರಿಗೆ ಮಾತ್ರವೇ ಸಾಧ್ಯ. ಗಾಂಧೀಜಿಯವರು ತಮ್ಮ ಜೀವನವನ್ನು ಪ್ರತಿಕ್ಷಣವೂ ತಮ್ಮ ಮನಸ್ಸಿನ ಕನ್ನಡಿಯಲ್ಲಿ ತೆಗೆದಿಟ್ಟುಕೊಂಡು ನೋಡುತ್ತಿರುವರೆಂದು ಯಾರಿಗಾದರೂ ತೋರುತ್ತದೆ. ಕೃಷ್ಣದಾಸನೊಂದುಸಲ ಬಾಪುಜಿಯ ಕೊಠಡಿಯೊಳಕ್ಕೆ ಬಂದಾಗ ಆತನನ್ನು ನೋಡಿ "ಇಲ್ಲಿ ನೋಡು,

**ಲಕ್ಕೋಟಿಗಳು**

ನಾನು ಮಾಡಿರುವ ಕೆಲಸವನ್ನು" ಎಂದು ನಗುದೋರಿ

ದರು. ಕಸದ ಬುಟ್ಟಿಯಲ್ಲಿ ಸೇರಿದ್ದ ಹಳೆಯ ಲಕೋಟೆಗಳನ್ನು ತೆಗೆದಿಟ್ಟುಕೊಂಡು ತಿರುವಿಹಾಕಿ ಕತ್ತರಿಸಿ ಅವುಗಳನ್ನೇ ಹೊಸ ಲಕ್ಕೋಟೆಗಳನ್ನಾಗಿ ಮಾಡಿಟ್ಟಿದ್ದರು. ಇಟ್ಟುಕೊಂಡಿದ್ದ ಕೆಲಸ ಮುಗಿದುಹೋದ ಮೇಲೆ ಸಿಕ್ಕಿದ ಮೂರು ನಾಲಕ್ಕು ನಿಮಿಷಗಳಲ್ಲಿ ಸುಮ್ಮನಿರಲಾರದೆ ಮಾಡಿದ ಕೆಲಸವದು "ಇವೇಕೆ ವ್ಯರ್ಥವಾಗಬೇಕು?" ಇನ್ನೊಂದು ಸಲ ಉಪಯೋಗಿಸಿಕೊಳ್ಳಬಹುದಲ್ಲವೆ?" ಎನ್ನುತ್ತ ತಮ್ಮ ಕೆಲಸವನ್ನು ಕಂಡು ತಾವೇ ತೃಪ್ತಿಯನ್ನೂ ಉಲ್ಲಾಸವನ್ನೂ ಬೀರಿದರು.

ತಮ್ಮ ಕೆಲಸವನ್ನು ನೋಡಿ ತೃಪ್ತಿಯಿಂದ ಸಂತೋಷಗೊಂಡು ಪರೀಕ್ಷೆಯಲ್ಲಿ ಗೆದ್ದ ಹುಡುಗನ ರೀತಿಯನ್ನು ಬಾಪುಜಿ ತೋರಿದ ಮತ್ತೊಂದು ಸನ್ನಿವೇಶವನ್ನು ಕೃಷ್ಣದಾಸನು ವಿವರಿಸಿರುವನು. ಒಂದು ದಿನ ಯಂಗ್ ಇಂಡಿಯ ವಾರಪತ್ರಿಕೆಗೆ ಲೇಖನ ಬರೆದ ಮೇಲೆ ಅದನ್ನು

ಶೈಲಿ

ತೋರಿ "ನೋಡು ಕೃಷ್ಣದಾಸ, ನನ್ನ ಬರವಣಿಗೆ ಈವತ್ತು ಎಷ್ಟು ಸೊಗಸಾಗಿದೆ! ನನ್ನ ಶೈಲಿ ನಾನೇ ಮೆಚ್ಚುವಂತಿದೆ ನೋಡು" ಎಂದು ನಗೆಗೂಡಿ ಹೇಳಿದರು. ಆ ರೀತಿ ಗಾಂಧೀಜಿಯ ಚಿತ್ತಕ್ಕೆ ತೃಪ್ತಿಯನ್ನು ಕೊಟ್ಟ ಲೇಖನದ ಒಂದು ಮುರುಕಿನ ಸಾರಾಂಶ—

ಕೌನ್ಸಿಲ್ ಸಭಿಕರುಗಳಿಗೆ ತಮ್ಮ ಪ್ರಯಾಣದ ವೆಚ್ಚ ವಗೈರೆಗಳೂ, ಮಂತ್ರಿಗಳಿಗೆ ತಮ್ಮ ಸಂಬಳ ಸಾರಿಗೆಗಳೂ, ವಕೀಲರಿಗೆ ತಮ್ಮ ಫೀಜು ರುಸುಮುಗಳೂ, ಮಾತಾಪಿತೃಗಳ ಮನಸ್ಸಿನಲ್ಲಿ ತಮ್ಮ ಮಕ್ಕಳಿಗೆ ಜೀವನವಂತಸ್ತನ್ನು ತಂದಿಡುವ ಶಿಕ್ಷಣ ತರ್ಫೀದುಗಳೂ, ಲಕ್ಷಾಧೀಶರಿಗೆ ತಮ್ಮ ಲಕ್ಷಗಳನ್ನು ಗುಣಿಸಿಟ್ಟುಕೊಳ್ಳಲು ಅನುಕೂಲ ಸಂದರ್ಭ ಸನ್ನಿವೇಶಗಳೂ, ಉಳಿದವರಿಗೆಲ್ಲ ಪೌರುಷಶೂನ್ಯವಾದ ಶಾಂತಿಕ್ಷೇಮಗಳೂ ಅಂತರಂಗದ ಬಯಕೆಗಳಾಗಿರುತ್ತವೆ. ಕೇಂದ್ರದ ಸುತ್ತಲೂ ತಿರುಗುವ ರಂಕಲರಾಟಣದಂತೆ ಈ ಮಾಯಾ ಚಕ್ರವು ಗಿರುಗುಟ್ಟುತ್ತದೆ. ಆ ಭ್ರಮಣದಿಂದ ತಲೆ ತಿರುಗುವುದಾದರೂ ತಪ್ಪಿಸಿಕೊಂಡು ಹೊರಗೆ ಬರಲು ಯಾರಿಗೂ ಇಷ್ಟವಿಲ್ಲ. ಭ್ರಮಣದ ವೇಗವು ಹೆಚ್ಚಿದಂತೆ ಅವರ ಮೋಹವೂ ಹೆಚ್ಚುವುದು. ಆದರೆ ವಾಸ್ತವವಾಗಿ ಅದು

ಮೃತ್ಯುವಿನ ನಾಟ್ಯ. ಅಲ್ಲಿ ತೋರುವ ಉತ್ಸೇಕವು ಪ್ರಾಣ ಹೋಗುವ ಸಮಯದಲ್ಲಿ ಕಾಣುವ ಕೈಕಾಲುಗಳ ಒದ್ದಾಟದ ಚೇಷ್ಟೆ ಮಾತ್ರ".

ಬರಹದ ಮೇಜು

ಸಾಬರ್ಮತಿಯ ಆಶ್ರಮವನ್ನು ಒಳಹೊಕ್ಕು ಕಂಡಿದ್ದವರಿಗೆ ಬಾಪುಜೀ ಕೊಟಡಿಯಲ್ಲಿಟ್ಟಿದ್ದ ನಿಲುಮೇಜು ಅಥವಾ ಎತ್ತರದಲ್ಲಿ ನಿಲ್ಲಿಸಿದ್ದ ಡೆಸ್ಕು ಜ್ಞಾಪಕವಲ್ಲಿರಬಹುದು. ಶ್ಯಾನಭೋಗರು ಲೆಕ್ಕ ಬರೆಯಲಿಟ್ಟುಕೊಳ್ಳುವಂತಹ ಡೆಸ್ಕನ್ನು ಎತ್ತರದಲ್ಲಿ ಹೊಂದಿಸುವುದೇತಕ್ಕೆ? ನಿಂತುಕೊಂಡು ಬರೆಯುವುದೇತಕ್ಕೆ? ಕುಳಿತುಕೊಂಡು ಬರೆದು ಬರೆದು ಆಯಾಸವಾದರೆ ನಿಂತುಕೊಂಡು ಬರೆಯುವುದಕ್ಕೆ! ಕುಳಿತು ಕುಳಿತು ಆಯಾಸವಾದರೆ ಅದಕ್ಕೆ ಪರಿಹಾರ ನಿಂತುಕೊಂಡಿರುವುದು! ಬರೆದು ಬರೆದು ಬಲಗೈಗೆ ನೋವೋ ಜೋವೋ ಹಿಡಿದರೆ ಎಡಗೈಯಿಂದ ಬರೆಯುವ ಪ್ರಯತ್ನ ಮಾಡುವಾತನ ದೃಷ್ಟಿಯಲ್ಲಿ ಬರವಣಿಗೆ ನಿಂತುಹೋಗದೆ ಮುಂದೆ ಸಾಗತಕ್ಕದ್ದು ಮಾತ್ರವೇ ಮುಖ್ಯ. ದೇಹವನ್ನು ನಿಲ್ಲಿಸಿದರೇನು, ಕೂರಿಸಿದರೇನು? ಬಲಗೈಯಿಂದ ಬರೆದರೇನು, ಎಡಗೈಯಿಂದ ಬರೆದರೇನು?

ಮ್ಯೂರಿಯೆಲ್ಲಳ ಕಳವಳ

ಇಂಗ್ಲಂಡಿನ ರಾಜಧಾನಿಯಲ್ಲಿ ಕಿಂಗ್ಸಿ ಹಾಲ್ ಎಂಬೆಡೆಯಲ್ಲಿ ಮ್ಯೂರಿಯೆಲ್ ಲೆಸ್ಟರ್ ಎಂಬಾಕೆಯ ಅತಿಥಿಯಾಗಿ ಗಾಂಧೀಜಿ ಇದ್ದರಷ್ಟೆ. ಆ ಸಮಯದಲ್ಲಿ ಅಲ್ಲಿಯ ಮಿತ್ರರು ಬಾಪುಜಿಯವರಿಂದ ರೇಡಿಯೊ ಮುಖಾಂತರ ಅಮೆರಿಕದ ಜನರಿಗೆ ಭಾರತೀಯ ಸಮಸ್ಯೆಯನ್ನು ಕುರಿತು ತಿಳಿಯಹೇಳಿಸುವ ಏರ್ಪಾಟು ಮಾಡಿದ್ದರು. ಸಂಜೆ ಆರುಗಂಟೆಗೆ ಸರಿಯಾಗಿ ಭಾಷಣವನ್ನು ಮಾಡಲನುಕೂಲಿಸುವಂತೆ ಆ ಮನೆಯ ಒಂದು ಕೊಟಡಿಯಲ್ಲಿಯೇ ಯಂತ್ರಗಳನ್ನು ತಂದಿಟ್ಟು ಸಿದ್ಧಪಡಿಸಿದರು. ಅಮೆರಿಕದ ಜನಸಮುದಾಯಕ್ಕೆಲ್ಲ ಕೇಳಿಸುವಂತೆ ಮಾತನಾಡುವ ಸುಸಂದರ್ಭ! ಅಮೂಲ್ಯವಾದ ಅವಕಾಶ! ಆ ಮ್ಯೂರಿಯೆಲ್ಲಳ ಸಂಭ್ರಮಕ್ಕಂತೂ ಪಾರವೇ ಇಲ್ಲ. ಬೆಳಿಗ್ಗೆಯೇ ತನ್ನ ಅತಿಥಿಗೆ ಸಂಜೆ ಭಾಷಣದ ಏರ್ಪಾಟಿದೆಯೆಂದು ಎಚ್ಚರಿಕೆ ಕೊಟ್ಟಳು. ತಮ್ಮ ಭಾಷಣವನ್ನು ಮೊದಲೇ ಸಿದ್ಧಮಾಡಿಕೊಳ್ಳುವರೋ ಇಲ್ಲವೋ ಎಂದು ಆ

ಹೊತ್ತಿಲ್ಲ ತವಕಪಟ್ಟಳು. ಮೊದಲು ಪರಿಚಯ ಮಾಡಿಕೊಡಲು ತಾನು ಹೇಳಬೇಕಾದ ನಾಲ್ಕಾರು ಮಾತುಗಳನ್ನು ಪುನಃಪುನಃ ಸಡಗರದಿಂದ ಮನನಮಾಡಿಕೊಂಡಳು. ಮಧ್ಯಾಹ್ನವಾಯಿತು, ಸಂಜೆ ಸಮೀಪಿಸಿತು; ಯಾವಾಗ ನೋಡಿದರೂ ಬಾಪುಜಿ ಮತ್ತಾವುದೋ ಕೆಲಸದಲ್ಲಿ ಮಗ್ನ ರಾಗಿದ್ದಾರೆ. ಕಡೆಗೆ ತಾನೇ ಮುಂದೆ ಬಿದ್ದು ಒಂದು ಸಲ "ಬಾಪುಜಿ, ಆರುಗಂಟೆಗೆ ಸರಿಯಾಗಿ ತಾವು ರೇಡಿಯೋ ಯಂತ್ರದಲ್ಲಿ ಮಾತನಾಡುವುದಿದೆ" ಎಂದಳು. "ಜ್ಞಾಪಕವಿದೆ" ಎಂದುಬಿಟ್ಟರು. ಇನ್ನೇನುತಾನೇ ಮಾಡಬೇಕು ಆ ನಾಥೆ! "ಬೇರೆ ಕೆಲಸಗಳನ್ನು ದೂರಮಾಡಿ ಸ್ವಲ್ಪ ಹೊತ್ತು ಬಿಡಿಸಿಕೊಂಡು ತನ್ನ ಭಾಷಣದ ಸನ್ನಾಹವನ್ನು ಮಾಡಿಕೊಳ್ಳದೆ ಒಂದಾದ ಮೇಲೊಂದು ಯಾವುದೋ ಕಾಷ್ಠಾವ್ಯಸನಕ್ಕಾಗಿಯೇ ಮನಸ್ಸು ಕೊಡುತ್ತಿದಾನೆ ಈತ! ಗೊತ್ತಾದ ವೇಳಗೆ ಸರಿಯಾಗಿ ಯಂತ್ರದ ಬಳಿ ಬರುವನೋ ಇಲ್ಲದೆ ಕಾಯಿಸಿ ಕಾಲನಷ್ಟ ಮಾಡುವನೋ! ಆತನ ಪರಿಚಯ ಮಾಡಿಕೊಡಲು ಐದು ನಿಮಿಷ ಕಾಲ ಮಾತನಾಡಬೇಕಾದ ನಾನೇ ಆತ ಬರುವತನಕ ಮಾತನ್ನು ಬೆಳೆಸಬೇಕಾದೀತೋ ಏನೋ!" ಎಂದು ಕಳವಳಪಟ್ಟದ್ದೂ ಪಟ್ಟದ್ದೇ. ಕಡೆಗೆ ತನ್ನ ವೇಳೆಗೆ ಸರಿಯಾಗಿ ಭಾಷಣವನ್ನು ಮೊದಲಿಟ್ಟಳು. ತನ್ನ ಐದು ನಿಮಿಷಗಳ ಹೊತ್ತಿನ ಕಡೆಯ ನಿಮಿಷ ನಡೆಯುತ್ತಿತ್ತು; ಆಗಲೆ ಬಾಪುಜಿ ಹಿಂದಿನಿಂದ ಕೊಟಡಿಯೊಳಕ್ಕೆ ಚಟಚಟನೆ ಬಂದುಬಿಟ್ಟರು. ಬೆಟ್ಟದ ಭಾರವನ್ನಿಳಿಸಿದಂತಾಯಿತು ಮ್ಯೂರಿಯೆಲ್ಲಳಿಗೆ. ತನ್ನ ಕಡೆಯ ವಾಕ್ಯವನ್ನು ಮುಗಿಸಿದಳು. ಆಗ ಮುಂದೊಂದು ಹೆಜ್ಜೆಯಿಟ್ಟು ನಸುನಗುತ್ತ ಬಾಪುಜಿ "Am I am to speak into this?"—"ಈ ಬಳಿಯೊಳಕ್ಕೆ ನನ್ನ ಧ್ವನಿಯನ್ನು ಬಿಡಬೇಕೋ?" ಎಂದರು. ಮುಂದೆ ತಮ್ಮ ಭಾಷಣವನ್ನು ಅಮೋಘವಾದ ರೀತಿಯಲ್ಲಿಯೇ ನಿರಾಯಾಸವಾಗಿ ಮಾಡಿಬಿಟ್ಟರು. ಒಂದು ಶಬ್ದ ಕೆಡಲಿಲ್ಲ, ಒಂದು ವಾಕ್ಯ ತಪ್ಪಲಿಲ್ಲ, ಒಂದಂಶವಾದರೂ ಬಿಟ್ಟುಹೋಗಲಿಲ್ಲ. ದಿನವೆಲ್ಲ ತಹತಹಪಟ್ಟದ್ದು ಚೇತರಿಸಿಕೊಳ್ಳುತ್ತ ಚಿತ್ತವನ್ನು ಸಮಾಧಾನಕ್ಕೆ ತಂದುಕೊಂಡು ಪಕ್ಕದಲ್ಲಿ ನಿಂತುಕೇಳಿದ ಮ್ಯೂರಿಯೆಲ್ಲಳು ಈತನ ಪರಿ

**ಬಳೆಯ ಬಾಯಿ**

ಪೂರ್ಣತೆಯಿಂದ ಭ್ರಾಂತಳಾದ ಅಂಶ ಬೇರೆ. ಅತಿಮುಖ್ಯವೆಂದು ತಪಿಸುತ್ತ ಹಗಲೆಲ್ಲ ಕಾತರದಿಂದಿದ್ದಾಕೆಗೆ "ಈ ಬಳೆ ಬಾಯಿಯ ಕೊಳವೆಯಲ್ಲಿ ಧ್ವನಿ ಬಿಡಬೇಕೇ?" ಎಂಬ ಸರಸ ವಾಕ್ಯವನ್ನಾಡಿದ ಬಾಪುಜಿಯ ಚಿತ್ತಸ್ವಾಸ್ಥ್ಯವು ಪರಮಾದ್ಭುತವಾಗಿ ತೋರಿತು. ಬಾಪುಜಿಗೆ ಆಶ್ಚರ್ಯವೂ ಇಲ್ಲ, ಸಂಭ್ರಮವೂ ಇಲ್ಲ; ಕಳವಳ ಮೊದಲೇ ಇಲ್ಲ. "ಈ ಯಂತ್ರದ ಬಾಯಿ ಇದೋ? ಅದರೊಳಕ್ಕೆ ನನ್ನ ಧ್ವನಿ ಬಿಡಬೇಕೋ?" ಎಂಬುದರಲ್ಲಿ ಅವರಿಗೊಂದು ವಿನೋದ ತೋರಿತು.

ಈ ರೀತಿ ವಿನೋದಗೊಂಬಾತನು ಸಾಮಾನ್ಯ ಸರಸಸಲ್ಲಾಪಗಳಲ್ಲಿ ಹಾಸ್ಯವನ್ನು ತೋರಿದ್ದಾನೆಯೇ? ಲಂಡನ್ನಿನಲ್ಲಿ ಕ್ರೈಸ್ತಮತ ಭಕ್ತರು ಕೆಲವರು ಬಾಪುಜಿಯವರಿಂದ ದಾರಿದ್ರ್ಯವ್ರತಧಾರಣೆಯ ವಿಷಯವಾಗಿ ಉಪನ್ಯಾಸ ಬಯಸಿ ಅದಕ್ಕೆ ತಕ್ಕ ಏರ್ಪಾಟು ಮಾಡಿದರು. ಉಪನ್ಯಾಸವು ಗಿಲ್ಡ್‌ಹೌಸೆಂಬಲ್ಲಿ ನಡೆಯಿತು. ಒಳ್ಳೆಯ ಸಭೆ ಸೇರಿತ್ತು. ಸಭೆಯಲ್ಲಿ ಕ್ರೈಸ್ತ ಪಾದ್ರಿಗಳಲ್ಲದೆ ಇತರರನೇಕರೂ ಮಧ್ಯೇ ಮಧ್ಯೇ ಬಾಪುಜಿಯ ಬೆಂಗಾವಲಿಗೆಂದು ನಿಯುಕ್ತರಾಗಿ ಛದ್ಮವೇಷಧಾರಿಗಳಾಗಿದ್ದ ಪೋಲೀಸಿನವರೂ ಇದ್ದರು. ಭಾಷಣಮಾಡುತ್ತ ಬಾಪುಜಿ ಪ್ರಶ್ನೆಗಳನ್ನು ಕೇಳಿಸಿಕೊಂಡು ಉತ್ತರ ಹೇಳುವುದು ರೂಢಿ. ಸಭೆಗಳಲ್ಲಿ ಮಾತಾಡುವಾಗ ಗಾಂಧೀಜಿಯ ರೀತಿಯು ಶಾಂತತೆಯಿಂದ

**ಪೋಲೀಸ್ ಫಿರ್ಯಾದು**

ತುಂಬಿದ್ದು ಮೃದುವಾಗಿ ದೃಢವಾಗಿ ತಾಳಕ್ಕೆ ಸರಿಯಾಗಿ ಉಚ್ಚರಿಸಿದಂತೆ ನಿಧಾನವಾಗಿ ಮಾತುಗಳೊಂದೊಂದಾಗಿ ಸ್ಪಷ್ಟತೆಗೂಡಿ ಹೊರಬೀಳುವುವು. ಆಗ "ದಾರಿದ್ರ್ಯವನ್ನು ತಾನಾಗಿಯೇ ವರಿಸಿ ಕಟ್ಟಿಕೊಳ್ಳುವುದು ಕಠಿಣವಾದ ವ್ರತಸ್ವೀಕಾರ. ಮೊದಮೊದಲು ಅತಿ ಕಠಿಣ. ಮೈಮೇಲಿನ ಬಟ್ಟೆಗಳನ್ನು ತೆಗೆದಿಟ್ಟಂತೆ ಮಾತ್ರವಲ್ಲ, ದೇಹಕ್ಕೆ ಸೇರಿದ ಚರ್ಮವನ್ನೇ ಸುಲಿದು ಬೇರೆಯಾಗಿ ಎತ್ತಿಟ್ಟ ಹಾಗಾಗುವುದು. ಆದರೆ 'ಗಾಂಧೀಯವರೆ, ನೀವು ಮೈಮೇಲೆ ಬಟ್ಟೆ ಹಾಕಿದ್ದೀರಲ್ಲವೆ?' ಎಂದು ಯಾರಾದರೂ ಕೇಳುವುದಾದರೆ ಪ್ರತ್ಯುತ್ತರವಾಗಿ ಅದಕ್ಕೆ 'ದೇಹ

ವೆಂಬುದಿರುವವರೆಗೂ ಸ್ವಲ್ಪವಾದರೂ ಬಟ್ಟೆಯನ್ನು ಧರಿಸಲೇಬೇಕಲ್ಲವೆ?' ಎಂದು ಹೇಳಬೇಕಾದೀತು. ಆದರೆ ಇಲ್ಲಿರತಕ್ಕವರಾರಾದರೂ ನಾನು ಟ್ಟಿರುವ ಬಟ್ಟೆಯನ್ನು ಕಿತ್ತುಕೊಳ್ಳುವಪಕ್ಷದಲ್ಲಿ ನಾನೇನೂ ಪೋಲೀಸಿನವರಲ್ಲಿ ಫಿರ್ಯಾದು ಹೇಳತಕ್ಕವನಲ್ಲ" ಎಂದರು. ಸಭಿಕರೆಲ್ಲರೂ ಘೊಳ್ಳೆಂದು ನಕ್ಕರು; ಎಲ್ಲರಿಗಿಂತ ಹೆಚ್ಚಾಗಿ ಗೋಪ್ಯ ಪೋಲೀಸಿನವರು ನಕ್ಕರು.

ಈ ಸಂಗತಿಯನ್ನು ವಿವರಿಸುತ್ತ ಡಾಕ್ಟರ್ ಮಾಡ್‌ರಾಯ್ಡೆ ಎಂಬ ಇಂಗ್ಲಿಷ್ ಜಾತಿಯ ವಿದುಷೀಮಣಿಯು ತನ್ನ ಲೇಖನವನ್ನು ಮುಂದರಿಸುತ್ತ "ಗಾಂಧೀಜಿಯವರಲ್ಲಿ ಕಾಣುವ ಹಾಸ್ಯ ಪ್ರೀತಿಯೂ ಹಾಸ್ಯಗ್ರಾಹಿತನವೂ ನಮ್ಮಲ್ಲಿರುವಂತೆಯೇ ಇರುವುದನ್ನು ಕಂಡ ತರುವಾಯ ಪರಸ್ಪರ ಬಾಂಧವ್ಯಕ್ಕಡ್ಡಿಯಿಲ್ಲದಂತಾಗಿ ಮನಸ್ಸಿಗೆ ಪರಮ ಸಮಾಧಾನವಾಗುವುದು" ಎಂದು ಬರೆದಳು.

ಲಂಡನ್ನಿನಲ್ಲಿ ನಡೆದ ಸಲ್ಲಾಪಗಳಲ್ಲಿಯೇ ಮತ್ತೆರಡು ದೃಷ್ಟಾಂತಗಳನ್ನು ಕಾಣಬಹುದು. ಒಬ್ಬಾನೊಬ್ಬ ಇಂಗ್ಲಿಷ್ ಗೃಹಸ್ಥ ಗಾಂಧೀಜಿಯವರನ್ನು ಮೆಚ್ಚಿ ಅವರಲ್ಲಿಗೆ ಭಕ್ತಿಯಿಂದ ಬಂದು ಮಾತನಾಡಿಸುತ್ತಿದ್ದನು. ಆತನಷ್ಟೇನೂ ಮೇಧಾವಿಯಲ್ಲ; ಯತ್ಕಾವಮಾನ್ಯ. ಯುದ್ಧವೆಂಬ ಅನ್ಯಾಯವನ್ನು ನಿಲ್ಲಿಸುವ ಪ್ರಯತ್ನದಲ್ಲಿ ಹಾರ್ದ್ರೈಕೆಯುಳ್ಳವನು. ಆತನನ್ನೊಂದು ಸಲ ಬೀಳ್ಕೊಡುವಾಗ ಬಾಪುಜಿ "ನಿಮಗೆಷ್ಟುಮಂದಿ ಮಕ್ಕಳು?" ಎಂದು ಕೇಳಿದರು. "ಎಂಟು ಮಕ್ಕಳಿದ್ದಾರೆ" ಎಂಬ ಪ್ರತ್ಯುತ್ತರವನ್ನಾತ ಕೊಟ್ಟ ಕೂಡಲೆ ಬಾಪುಜಿ ನಗುತ್ತ "ನಿಮ್ಮಲ್ಲಿ ಅರ್ಧಯೋಗ್ಯತೆ ನನ್ನದು" ಎಂದು ನಗಿಸಿದರು.

ಮಕ್ಕಳು

ಎಂತಹ ಪ್ರಶ್ನೆಯನ್ನು ಹಾಕಿದರೂ ಬಾಪುಜಿಗೆ ಬೇಸರವಿಲ್ಲ, ಮನಸ್ಸಿನ ಹಿಂಸೆಗೆ ಅವಕಾಶ ಕೊಡುವುದಿಲ್ಲ, ಹುಳಿಹುಳಿಯಾದ ಮಾತನ್ನು ಬಾಯಿಂದ ಆಡುವುದಿಲ್ಲ. ಈ ರೀತಿ ಸದಾ ಸೌಮ್ಯದಿಂದಿರುವುದು ಹೇಗೆ ಸಾಧ್ಯವೆಂಬ ಪ್ರಶ್ನೆ ಇಂಗ್ಲಂಡಿನ ಜಾಣರಿಗೂ ತೋರಿತು.

ಒಂದು ಸಭೆಯಲ್ಲಿ ಪ್ರಶ್ನೋತ್ತರಗಳಾಗುತ್ತಿದ್ದ ಸಮಯದಲ್ಲಿ ಒಬ್ಬ ಗೆಣೆ ಯನಾಪ್ರಶ್ನೆಯನ್ನು ಕೇಳಿಯೇ ಕೇಳಿಬಿಟ್ಟನು.—

ಮನಸ್ಸಿನ ಹಿಂಸೆ "ಗಾಂಧೀಜಿ, ನಿಮ್ಮ ಮನಸ್ಸಿಗೆ ಹಿಂಸೆಯು ಎಂದೂ ತೋರುವುದಿಲ್ಲವೆ? ಕಹಿಮಾತನ್ನು ಯಾವಾಗಲೂ ನೀವಾಡುವುದಿಲ್ಲವೆ?" ಪುಟನೆಗೆಯುವ ಚಂಡಿನಂತೆ ಬಂತು ಉತ್ತರ "ಕಸ್ತೂರಿಬಾಯಿಯನ್ನು ಕೇಳಿ ನೋಡಿ." ಸಭೆಯವರೆಲ್ಲರೂ ಪ್ರೀತಿ ಯಿಂದ ನಕ್ಕರು.

ಗಾಂಧೀಜಿ ಲಂಡನ್ನಿನಲ್ಲಿದ್ದಾಗ ಆತನ ಬಳಿಗೆ ಬಂದುಹೋಗು ತ್ತಿದ್ದವರ ಮಾತುಕಥೆಗಳ ಚಿತ್ರವನ್ನು ಕ್ಲೇರಾ ಷೆರಿಡ್ ಎಂಬಾಕೆಯು ಮಾತುಗಳಿಂದಲೇ ಬಣ್ಣಿಸಿದ್ದಾಳೆ. ವಿವರವು ಸ್ವಲ್ಪ ದೀರ್ಘವಾದರೂ ಸ್ವಾರಸ್ಯವಾಗಿದೆ.

'ಲಂಡನ್ನಿನಲ್ಲಿದ್ದಾಗ ಪ್ರತಿಪ್ರಾತಃಕಾಲ ೧೦ರಿಂದ ೧೨ ಗಂಟೆವರೆಗೆ ಬಾಪುಜಿಯನ್ನು ಕಂಡು ಮಾತನಾಡಿಸುವವರಿಗೆ ಸಮಯ. ಅವರನ್ನು ಸಹನವಿಶ್ವಾಸಗಳಿಂದ ಬರಮಾಡಿ ಕೊಂಡಾಗ್ಯೂ ಬಾಪುಜಿ ತನ್ನ ನೂಲುವ ಕೆಲಸಕ್ಕೆ ವಿಘ್ನಮಾಡಿ ಕೊಳ್ಳುತ್ತಿರಲಿಲ್ಲ. ಬಂದವರನ್ನೆದುರುಗೊಳ್ಳುವಾಗ ಸಾಮಾನ್ಯ ವಾಗಿ ಆತನೆದ್ದು ನಿಲ್ಲುತ್ತಿರಲಿಲ್ಲ.

ಹೊರಡುವುದಕ್ಕೆ ತಡಮಾಡಿಕೊಂಡು ಹೆಚ್ಚುಹೊತ್ತು ನಿಂತವರನ್ನೂ ವ್ಯರ್ಥಾಲಾಪ ಬೆಳೆಸಿದವರನ್ನೂ ಮಾತನಾಡಿಸು ವಾಗ ಮೃದುತನವನ್ನೂ ದಿಟ್ಟತನವನ್ನೂ ಬೆರೆಸಿದ ಆತನ ವಚನ ಗಳನ್ನು ಕೇಳಿ ನನಗೆ ಅತಿ ವಿಶ್ವಾಸವುಂಟಾಯಿತು.

ದಕ್ಷಿಣ ಆಫ್ರಿಕದಲ್ಲಿ ತಾನು ಕಂಡವನೆಂದು ಹೇಳಿಕೊಳ್ಳುತ್ತ ಒಬ್ಬಾತನು ಬಂದು ತನ್ನ ಪೂರ್ವಪರಿಚಯದ ನೆನಪನ್ನುಂಟು ಮಾಡಿಕೊಡಲು ವ್ಯರ್ಥವಾಗಿ ಪ್ರಯತ್ನಿಸಿದನು.

"ಗಾಂಧೀಜಿ, ದಕ್ಷಿಣ ಆಫ್ರಿಕದಲ್ಲಿ ನಾವಿಬ್ಬರೂ ಮಾತು ಕಥೆಗಳನ್ನಾಡಿದುದು ಜ್ಞಾಪಕವಿಲ್ಲವೇ ತಮಗೆ?"

"ದಕ್ಷಿಣ ಆಫ್ರಿಕವೇನೋ ಸರಿಯೆ, ನೆನಪಿದೆ. ಆದರೆ...."

"ಡರ್ಬನ್ನಿನ ಹೊಟೇಲಿನಲ್ಲಿ ಉದ್ಯಾನವನದ ನೆನಪಿಲ್ಲವೆ?"

"ಉದ್ಯಾನವನದಲ್ಲಿ ಕಾಲಿಡಬಾರದೆಂಬ ಅಡ್ಡಿಗೊಪ್ಪಿದ ಬಳಿಕ ಹೊಟೇಲಿಗೆ ನನ್ನನ್ನು ಸೇರಿಸಿದ್ದು ಜ್ಞಾಪಕವಿದೆ. ಅಲ್ಲಿ ಭಾರತೀಯನನ್ನು ಸೇರಿಸಿದಾಗ ಆತ ತನ್ನ ಕೊಟಡಿಯಲ್ಲಿ ಮಾತ್ರವೇ ತಿರುಗಾಡಬೇಕೆಂಬ ನಿಯಮವಿತ್ತು. ಆದರೆ ಅದು ಪ್ರಸಕ್ತವಲ್ಲ. ನಿಮ್ಮನ್ನು ಕಂಡುದು ಸಂತೋಷ. ನಿಮಗೆ ಅವ ಸರವಾಗಿದ್ದು ಹೊರಡುವ ಪಕ್ಷಕ್ಕೆ ನನ್ನಡ್ಡಿಯೇನೂ ಇಲ್ಲ."

ಆಗ ಆಗಂತುಕನ ಮುಖವನ್ನು ನೋಡಿ ನನಗೆ ಸ್ವಲ್ಪ ಮರುಕತೋರಿತು. ಆದರೆ ಗಾಂಧೀಜಿಯವರು ಕಾರಣವಿಲ್ಲದೆ ದೂರ ಸರಿಯತಕ್ಕವರಲ್ಲವೆಂದು ನನಗೆ ತಿಳಿದಿತ್ತು. ಪ್ರಾಯಶಃ ದಕ್ಷಿಣ ಆಫ್ರಿಕದಲ್ಲಿ ನಡೆದ ಮಾತುಕಥೆಗಳ ಪ್ರಸಂಗವು ಆತನಿಗೆ ಚೆನ್ನಾಗಿಯೇ ಜ್ಞಪ್ತಿಯಲ್ಲಿತ್ತು!

ಒಬ್ಬರ ಹಿಂದೊಬ್ಬರು ಮೆರವಣಿಗೆಯ ಚಂದದಲ್ಲಿ ಬರುತ್ತಿದ್ದುದು ಪದ್ಧತಿ. ದಕ್ಷಿಣ ಆಫ್ರಿಕದ ಆ ದೊಡ್ಡ ಮನುಷ್ಯನು ಹೊರಟ ಕೂಡಲೆ ಒಬ್ಬಾನೊಬ್ಬ ಇಂಗ್ಲಿಷ್ ಗೃಹಸ್ಥನು ಒಳಗೆ ಬಂದನು ಆತನನ್ನು ಗಾಂಧೀಜಿ ಬಹಳ ಸ್ನೇಹಾದರಗಳಿಂದ ಬರಮಾಡಿಕೊಂಡನು. ಮಾತುಕಥೆ ಮಾತ್ರ ಸಾಮಾನ್ಯ ಮಟ್ಟ ವನ್ನು ಬಿಟ್ಟೇರಲಿಲ್ಲ. ಇಂಗ್ಲಂಡಿನ ಹವ, ಪೈರುಪಚ್ಚೆಗಳಿಷ್ಟೋ ಅಷ್ಟೇ ವಿಷಯ. ಪುಣೆಯ ಆಸ್ಪತ್ರೆಯಲ್ಲಿ ಗಾಂಧೀಜಿಯವರಿಗೆ ಶಸ್ತ್ರ ಚಿಕಿತ್ಸೆ ನಡೆಸಿದ್ದಾತನು ಆತ.

ಆ ಡಾಕ್ಟರು ಹೊರಟಕೂಡಲೇ ಫ್ರೆಂಚ್ ಜಾತಿಯ ನ್ಯಾಯವಾದಿ ಸ್ತ್ರೀಯೊಬ್ಬಾಕೆ ಬಂದಳು. "ಫರಾನ್ಸಿ ಜನರಲ್ಲಿ ಇನ್ನೂ ಯುದ್ಧಾತುರವಿದೆಯೇ?" ಎಂದು ಗಾಂಧೀಜಿ ಕೇಳಿದಾಗ "ಮಸ್ಯುರ್ ಗಾಂಧೀ! ನಾವಲ್ಲ ಯುದ್ಧಮಾಡಿದವರು! ಆತ್ಮರಕ್ಷಣೆಯನ್ನು ಮಾತ್ರ ಮಾಡಿಕೊಂಡೆವು" ಎಂದು ಸ್ವಲ್ಪ ಆಕ್ಷೇಪಣೆಯ ಸ್ವರವನ್ನೆತ್ತಿ ಪ್ರತ್ಯುತ್ತರ ಕೊಟ್ಟಳು. ಅದಕ್ಕೆ

'ಮುಸ್ಯುರ್' ಗಾಂಧೀ ತಾಳ್ಮೆಯ ಮಂದಹಾಸವನ್ನು ಮಾತ್ರ ಬೀರಿದರು.

ತರುವಾಯ ಉಗ್ರಪಕ್ಷದ ವಾರಪತ್ರಿಕೆಯೊಂದರ ಸಂಪಾದಕನೊಬ್ಬಾತನು ಪ್ರವೇಶಿಸಿದನು. ನಾನೇ ಸ್ವಂತವಾಗಿ ಕೇಳಬೇಕೆಂದಿದ್ದ ಪ್ರಶ್ನೆಗಳನ್ನು ಆತನು ಕೇಳಿದನು. ವಾದಮಾಡುತ್ತ ಕಾರಣಗಳನ್ನು ತೋರುವುದರಲ್ಲಿ ಆತನು ಸುನಿಶ್ಚಿತವಾದ ರೀತಿಯಲ್ಲಿಯೇ ಸ್ಫೂರ್ತಿ ತೋರಿದನು. ಆದರೇನು? ಯಾವ ಪ್ರಶ್ನೆಗಾದರೂ ಗಾಂಧೀಜಿ ಸಮಾಧಾನ ಹೇಳುವನು. ಆತನ ಉತ್ತರಗಳಲ್ಲಿ ಖಂಡಿತತೆಯೂ ಸಂಪೂರ್ಣತೆಯೂ ತುಂಬಿ ತುಳುಕಾಡುತ್ತಿದ್ದವು.

ಸಂಪಾದಕನು ಹೊರಟನು. ಪಾಲ್ ರೋಬ್ಸ್ನ್ ಎಂಬ ವಿಖ್ಯಾತ ನೀಗ್ರೋನಾಯಕನ ಧರ್ಮಪತ್ನಿ ಬಂದಳು ಒಳಕ್ಕೆ. ಗಾಂಧೀಜಿಯ ಪಾದದ ಬಳಿ ನೆಲದ ಮೇಲೆ ಕುಕ್ಕರಿಸಿದಳು. ಅನಂತರ ಸಂಯುಕ್ತ ಸಂಸ್ಥಾನಗಳಲ್ಲಿ ನೀಗ್ರೋ ಜಾತಿಯವರ ಸ್ಥಿತಿಗತಿಗಳ ವಿಚಾರವನ್ನೆತ್ತಿದಳು. ಅದುವರೆಗೂ ಆ ವಿಚಾರವನ್ನು ಮಹಾತ್ಮಾಜಿ ಯೋಚನೆಗೆ ತಂದುಕೊಂಡಿರಲಿಲ್ಲ. ಆದರೇನು! ಆಕೆ ಅಂಕಿ ಲೆಕ್ಕಗಳನ್ನು ಒದಗಿಸಿ "ಮುಂದೆಂದಾದರೊಂದು ಕಾಲದಲ್ಲಿ ನೀಗ್ರೋ ಜನರದೇ ಪ್ರಾಬಲ್ಯ ಸಿದ್ಧಿಯಾಗುವುದೆಂದು ನಿಮಗೆ ತೋರುವುದಿಲ್ಲವೇ?" ಎಂದು ಕೇಳಿದಳು.

ಗಾಂಧಿಯವರಿಗೆ ಹಾಗೆ ತೋರಲಿಲ್ಲ. ಆಕೆ ಅಷ್ಟಕ್ಕೆ ಬಿಡಲಿಲ್ಲ.

"ಇತರ ಜಾತಿಗಳೊಂದಿಗೆ ನಾವು ಕಲೆತು ಹೋಗಬಹುದೆಂದು ತೋರುವುದೇ?"

"ಪ್ರಾಯಶಃ..........."

"ಹಾಗೆಯೇ ಆದರೆ ಆ ಬಳಿಕ?"

"ಆಬಳಿಕ ಅದು ನೀಗ್ರೋ ಜಾತಿಯ ಸಮಸ್ಯೆಯೇ ಆಗಿರುವುದಿಲ್ಲ"

ಆ ವೇಳೆಗೆ ಆಕಸ್ಮಿಕವಾಗಿ ಬಂದಂತೆ ಜರ್ಮನ್ ಜಾತಿಯ ಮಹಿಳೆಯೊಬ್ಬಾಕೆ ಒಳನುಗ್ಗಿದಳು. ಪರಿಚಯದ ಮಾತುಕಥೆಗಳಾವುವೂ ಇಲ್ಲ; ಬಹುಶಃ ಸುಪರಿಚಿತೆಯಾದುದರಿಂದ ಅವು ಬೇಕಾಗಿರಲಿಲ್ಲ. ನೂಲುವುದನ್ನು ಕ್ಷಣಕಾಲ ನಿಲ್ಲಿಸಿ ಗಾಂಧೀಜಿ ತನ್ನ ಹಸ್ತವನ್ನು—ಮೂಳೆ ಮೂಳೆಯಾದರೂ ಚಪಲತನದಿಂದ ತುಂಬಿದ ಬೆರಳುಗಳನ್ನು—ನೀಡಿದನು. ಆ ಹಸ್ತವನ್ನಾಕೆ ತನ್ನೆರಡು ಕೈಗಳಿಂದಲೂ ಹಿಡಿದು ಯಾವುದೋ ಅತಿಪವಿತ್ರ ವಸ್ತುವನ್ನು ಸ್ಪರ್ಶಿಸಿದಂತೆ ಭಾವಿಸಿಕೊಂಡಳು.

"ಜರ್ಮನಿಗೆ ಹಿಂತಿರುಗಿ ಪ್ರಯಾಣವೇ?" ಎಂದು ಗಾಂಧೀಜಿ ಕೇಳಿದನು. ಆಕೆ ಸಮ್ಮತಿಯಿಂದ ತಲೆಯನ್ನು ತಗ್ಗಿಸಿದಳು. ಆಕೆಯ ತುಟಿಗಳು ಅದಿರುತ್ತಿದ್ದವು. ಕಣ್ಣುಗಳು ಬಾಷ್ಪಪೂರಿತವಾಗಿದ್ದವು. ಮಾತನಾಡುವುದೇ ಕಷ್ಟವಾಗಿತ್ತು.

"ಗುಡ್ ಬೈ" ಎಂಬ ಒಂದು ಮಾತು ಹೇಳಿ ಒಂದು ಹೆಜ್ಜೆ ಹಿಂದಿಟ್ಟು ಆಕೆ ತನ್ನ ಕೈಗಳನ್ನು ಆಕಾಶದಲ್ಲಿ ಚಾಚಿ ತನ್ನ ದೃಷ್ಟಿಯನ್ನು ಆತನ ಮೇಲಿಯೇ ಇಟ್ಟು ಒಂದು ಬಾರಿ ಬಿಕ್ಕಿ ಕಡೆಗೆ ಹೊರಟಳು.

ಆಗ ಆಗಾಖಾನರ ಕಡೆಯಿಂದ ಒಬ್ಬ ದೂತನು ಕಾಣಿಸಿಕೊಂಡು ಒಂದು ಲಕ್ಕೋಟಿಯನ್ನು ಕೊಟ್ಟು "ಇದು ಬಲು ಮುಖ್ಯ. ಈ ಪಂಚಾಯತಿಗೆ ತಾವು ಒಪ್ಪುವಿರೆಂದು...."

ಆ ವೇಳೆಗೆ ಮುಂದೆ ಬಂದ ಹಿಂದೂ ಯುವಕನೊಬ್ಬನು ತಾನು ಕೈ ಹಿಡಿದಿದ್ದ ಅಮೆರಿಕನ್ ತರುಣಿಯ ಪರಿಚಯ ಮಾಡಿಕೊಟ್ಟನು. ಒಂದು ಕ್ಷಣಕಾಲದ ನೋಟದಲ್ಲಿ ಗಾಂಧೀಜಿ ಆಕೆಯನ್ನು ಆಪಾದಮಸ್ತಕವಾಗಿ ಕಂಡು "ನಿನ್ನ ಹೆಂಡತಿಯನ್ನು ಇಂಡಿಯಕ್ಕೆ ಕರೆದುಕೊಂಡು ಹೊರಡುವಿಯಾ?" ಎಂದು ಕೇಳಿದನು. ಅದಕ್ಕೆ "ತಥೈವ" ಎಂದು ಹೊರಟ ಉತ್ತರದಲ್ಲಿ ಸ್ವಲ್ಪ ಅಧೈರ್ಯವಿದ್ದಂತೆ ನನಗೆ ತೋರಿತು. ಆ ವಧುವಾದರೋ ಅತಿ

ಚಪಲೆ; ಧೈರ್ಯದಿಂದ ತುಂಬಿಕೊಂಡು ಆಡುತ್ತಿದ್ದಳು. "ಮಹಾತ್ಮಾ! ಸಂಯುಕ್ತ ಸಂಸ್ಥಾನಗಳಿಗೆ ನೀವು ಯಾವಾಗ ಬರುವುದು?"

"ಇನ್ನೂ ಇಷ್ಟರಲ್ಲೇ ಇಲ್ಲ"

"ನೀವು ಅಂದರೆ ಅಲ್ಲಿ ಪ್ರತಿಯೊಬ್ಬರಿಗೂ ಹುಚ್ಚು."

ಇದನ್ನು ಕೇಳಿದ ಕೂಡಲೇ ಮಹಾತ್ಮಾಜಿಯ ಕಣ್ಣುಗಳು ಪಿಳಪಿಳನೆ ಹಾಸ್ಯದ ಪ್ರಕಾಶವನ್ನು ಬೀರಿದವು. "ಚನ್ನಾಗಿ ತಿಳಿದ ನನ್ನ ಮಿತ್ರರು ಆ ದೇಶದಲ್ಲಿ ನನ್ನನ್ನು ಮೃಗಶಾಲೆಗೆ ದಾಖಲೆ ಮಾಡುವುದಾಗಿ ಹೇಳುತ್ತಾರೆ!"

"ಇಲ್ಲ, ಇಲ್ಲ" ಎಂಬ ಪ್ರತ್ಯುತ್ತರದ ಧ್ವನಿಯೊಂದಿಗೆ ನಗುವಿನ ತೆರೆಗಳ ಶಬ್ದವು ಸೇರಿಹೋಯಿತು.

ಆವೇಳೆಗೆ ಆಂಡ್ರೂಸ್ ಪ್ರವೇಶಿಸಿ ವಾರಾಂತ್ಯದ ಕಾರ್ಯಕ್ರಮದ ಅಂಶಗಳನ್ನೆತ್ತಿದನು. ಮುರಿದುಹೋದ ಒಂದೆಳೆ ದಾರವನ್ನು ನರಿವಡಿಸುತ್ತ ಗಾಂಧೀಜಿ "ಆಗಲಿ—ಆಗಲಿ" ಎನ್ನುವರು.

"ಮತ್ತೆ ಈ ಸಾಯಂಕಾಲ, ಬಾಪು, ಹದಿನ್ಶೈದು ಬಿಷಪ್ಪರ ಸ್ವಾಗತಸಭೆಯನ್ನು ಮರೆಯದಿರಬೇಕು. ಲಂಡನ್ನಿನ ಬಿಷಪ್ಪನು ನಿನ್ನನ್ನು ಕಾಣುವುದಕ್ಕಾಗಿಯೇ ಏಳು ಗಂಟೆಗೆ ಬರುವವನಾಗಿದ್ದಾನೆ" ಗಾಂಧೀಜಿ ಕುತ್ತಿಗೆಯೆತ್ತಿ ಚುರುಕಾಗಿ ನೋಡಿ "ಏಳು ಗಂಟೆ ಪ್ರಾರ್ಥನೆ ಹೇಗೆ?" ಎಂದರು. ಪ್ರಾರ್ಥನೆಯನ್ನು ತತ್ಪೂರ್ವವೋ ತದನಂತರವೋ ನಡೆಸಬಹುದೆಂದು ಆಂಡ್ರೂಸ್ ಉಸುರಿದನು. "ಹೋಗುತ್ತ ಮೋಟಾರಿನಲ್ಲಿಯೇ ಆಗಲಿ" ಎಂದು ಗಾಂಧೀಜಿ ಗೊತ್ತುಮಾಡಿದನು.'

ಪ್ರತ್ಯುತ್ತರ ಕೊಡುವ ಚಾತುರ್ಯದ ಚುರುಕನ್ನು ಭಾರಿ ಪತ್ರಿಕೋದ್ಯೋಗಿಯೊಬ್ಬನೊಂದುಸಲ ಅನುಭವಿಸಿದನು. ಉಪ್ಪಿನ ತೆರಿಗೆಯ

ವಿರೋಧದಿಂದ ಮೊದಲಾದ ಸತ್ಯಾಗ್ರಹದ ಕಾಲ. ಇಂಗ್ಲಂಡಿನ

**ಉತ್ತರದ ಚುರುಕು**

ವೃತ್ತಾಂತಪತ್ರಿಕೆಗಳ ಬಾತ್ಮಿದಾರರಲ್ಲೊಬ್ಬಾತನು ಗಾಂಧೀಜಿಯ ಬಳಿ ಆಪ್ತವರ್ಗದವನಂತೆಯೇ ಓಡಾಡುತ್ತಿದ್ದನು. ಇಂಗ್ಲಂಡಿಗೆ ಹೊರಡುವ ಮೊದಲು ಆತನು ಗಾಂಧೀಜಿಯವರ ದರ್ಶನಕ್ಕೆಂದು ಬಂದನು. ಎರಡು ಮೂರು ಮಾತಾದ ಮೇಲೆ "ಗಾಂಧೀಜಿ, ನಾನು ಇಂಗ್ಲಂಡಿಗೆ ಹೋಗುತ್ತಿದ್ದೇನೆ. ಅಲ್ಲಿಯ ಜನರಿಗೆ ತಾವು ನನ್ನ ಮೂಲಕ ಒಂದು ಸಂದೇಶವನ್ನು ಕೊಡಬೇಕು. ಆ ಜನರಿಗೆ ತಾವು ಹೇಳತಕ್ಕ ಮಾತೇನು?"

"ನಮ್ಮ ಬೆನ್ನಮೇಲಿನ ಸವಾರಿ ಸಾಕುಮಾಡಿ ಇಳಿಯಿರಿ" ಎಂಬ ಒಂದು ಮಾತಿನ ಸಂದೇಶ ಟಪಕ್ಕನೆ ಬಂತು. ಬಾರುಮಾಡಿದ ಬಂದೂಕಿನ ಕುದುರೆ ಹಾರಿಸಿದ ಕೂಡಲೆ ಗುಂಡು ಹಾರಿದಹಾಗೆ.

ಸಂಭಾಷಣೆಯ ಚಾತುರ್ಯದಲ್ಲಿ ಹಾಸ್ಯವನ್ನು ತೋರುವುದು ವಿಕಟಕವಿಗಳ ಚೇಷ್ಟೆ. ಆದರೆ ಯಾರಲ್ಲಿಯೂ ತಾತ್ಸಾರವನ್ನು ತೋರದಂತೆ ಹಾಸ್ಯದ ಮಾತನ್ನಾಡುವುದು ಅಪರೂಪ. ಸುತ್ತಮುತ್ತಲಿರತಕ್ಕವರನ್ನು ನಗಿಸುತ್ತಲಿರುವ ಗಾಂಧೀಜಿಯವರು ತಮ್ಮ ಹಾಸ್ಯದಿಂದ ಆನಂದವನ್ನು ಮಾತ್ರ ಬೀರತಕ್ಕವರು. ಖಿನ್ನತೆಯಲ್ಲಿಯೋ ಹಿಂಸೆಯಲ್ಲಿಯೋ ಸಿಕ್ಕಿ ಪೇಚಾಡುವವರ ಮನಸ್ಸನ್ನು ಆಹ್ಲಾದಕ್ಕೆಳೆಯತಕ್ಕವರು.

ಪುಣೆಯ ಸಸ್ಸೂನ್ ಆಸ್ಪತ್ರೆಯಲ್ಲಿ ಶಸ್ತ್ರಚಿಕಿತ್ಸೆ ನಡೆದ ತರುವಾಯ ಗಾಂಧೀಜಿಯವರನ್ನು ನೋಡಿಕೊಂಡು ಹೋಗಲು ಆಪ್ತೇಷ್ಟರು ಅಲ್ಲಿಗೆ ಪ್ರಯಾಣಬೆಳೆಸಿದರಷ್ಟೆ. ಲಾಲಾ ಲಜಪತರಾಯನೂ ಬಂದನು. ಗಾಂಧೀಜಿಯನ್ನು ಮಾತನಾಡಿಸುವ ಆತುರದಿಂದ ಬಂದಾತನು ಹಾಸಿಗೆಯ ಬಳಿ ನಿಂತಾಗ ಎದುರು ನಿಲ್ಲದೆ ಪಕ್ಕಕ್ಕೆ ಸರಿದು ನಿಂತನು. 'ಮಾತನಾಡಿಸಿದರೆ ಆಯಾಸವನ್ನುಂಟುಮಾಡಿದಂತಾದೀತು; ದೂರದಿಂದ ನೋಡಿಯೇ ತೃಪ್ತರಾಗುವುದು ಮೇಲು' ಎಂಬ ನಿಶ್ಚಯ ಆತನ ಮನಸ್ಸಿನಲ್ಲಿ. ಪುಣೆಯನ್ನು ಬಿಟ್ಟು ಹೊರಡುವ ಮೊದಲು ಲಾಲಾಜಿ

ಮತ್ತೊಮ್ಮೆ ಗಾಂಧೀಜಿಯವರ ದರ್ಶನವನ್ನು ತೆಗೆದುಕೊಂಡನು.

ಲಾಲಾಜಿಯ ಅಳು

ಹೀಗೆ ಎರಡನೆಸಲ ಲಾಲಾಜಿ ಬಂದಾಗ ಹೇಳತಕ್ಕ ಮಾತೊಂದೆರಡು ಮನಸ್ಸಿನಲ್ಲಿದ್ದರೂ ಆ ಮಾತು ಹೊರಗೆ ಹೊರಡದಂತೆ ಕಣ್ಣೀರಿನ ತೊಂದರೆ. ಕಣ್ಣೀರೂ ಧಾರಾಳವಾಗಿ ಬಾರದು, ಮಾತೂ ಧಾರಾಳವಾಗಿ ಬಾರದು. ಕಡೆಗೆ ಹೇಗೋ ಎರಡೂ ಹೊರಗೆ ಬಿದ್ದವು. ಈ ಅವಸ್ಥೆಯನ್ನು ಕಂಡು ಬಾಪುಜಿ ಸ್ವಲ್ಪ ಮಂದಹಾಸದಿಂದ "ಲಾಲಾಜಿ, ಭಾರಿ ನಗು ಬರುತ್ತದೆ. ಚನ್ನಾಗಿ ನಗೋಣವೆಂದರೆ ಹೊಟ್ಟೆಯ ಗಾಯ. ಆದರೂ ಹಿಡಿಸಲಾರದಷ್ಟು ನಗು ತೋರುತ್ತದೆ" ಎಂದರು. ಅಳುತ್ತಿದ್ದ ಲಾಲಾಜಿಗೂ ನಗು ಬಂತು. ಭಾರವನ್ನಿಳಿಸಿದ ಹಾಗಾಯಿತು. ಹಸನ್ಮುಖಿಯಾಗಿ ಲಾಲಾಜಿ ಸುತ್ತಮುತ್ತ ನೋಡಿ "ನಾವೀಗ ಶೋಕಿಸಬಾರದು. ಭಗವಂತನು ನಮ್ಮಲ್ಲಿ ಅಪಾರವಾದ ಕೃಪೆಯನ್ನು ತೋರಿದ್ದಾನೆ. ಸಂತೋಷದಿಂದಿರೋಣ" ಎನ್ನುತ್ತ ಹೊರಗೆ ಹೊರಟರು.

ಅದೇ ವರ್ಷದ ಕೊನೆಯಲ್ಲಿ ಬೆಳಗಾಂವಿಯಲ್ಲಿ ಅಖಿಲ ಭಾರತದ ರಾಷ್ಟ್ರಮಹಾಸಭೆ. ಮೊದಲು ಅಖಿಲ ಭಾರತದ ಕಾಂಗ್ರೆಸ್ ಕಮಿಟಿ ಸೇರಿತು. ಆದಿನ ಬೆಳಿಗ್ಗೆ ಮೌಲಾನಾ ಮಹಮ್ಮದಾಲಿಯವರು ತಮ್ಮ ಅಧ್ಯಕ್ಷಪದವಿಯನ್ನು ಮಹಾತ್ಮಾಜಿಗೆ ಒಪ್ಪಿಸಿದರು. ಮೂರು ಗಂಟೆ

ತಮಾಷಾ

ಕಾಲ ಸಭೆ ನಡೆದು ನಾನಾ ವಿಷಯಗಳು ಚರ್ಚೆಯಾದವು. ಅಧ್ಯಕ್ಷರಾಗಿ ಕುಳಿತು ಸಭೆಯನ್ನು ನಡೆಸಿದ ಬಳಿಕ ಗಾಂಧೀಜಿ ವೇದಿಕೆಯಿಂದ ಇಳಿದು ಬಂದರು. ಸಭೆ ಮುಗಿಯುವ ವೇಳೆಗೆ ಲಾಲಾಜಿ ಹಂದರದೊಳಕ್ಕೆ ಬಂದು ವೇದಿಕೆಯನ್ನು ಸಮೀಪಿಸಿದರು. ಆ ಹೊತ್ತಿನ ಕೆಲಸವನ್ನು ಮುಗಿಸಿದ್ದ ಗಾಂಧೀಜಿ ಆಟಕ್ಕೆ ತೊಡಗಿದ ಹುಡುಗನಂತೆ ನಗುತ್ತ ಓಡಾಡುತ್ತ ಇದ್ದರು. ಕಂಕುಳಲ್ಲಿ ಸಣ್ಣ ಗಂಟನ್ನು ಹೊತ್ತುಕೊಂಡು ನೆಗೆದಾಡುವ ಗೊಡ್ಡು ವೈದಿಕ ಪಿಳ್ಳೆಯ ಅವತಾರ! ಲಾಲಾಜಿಯನ್ನು ಕಂಡಕೂಡಲೆ ಕಿಲಕಿಲ ನಗುತ್ತ "ತಮಾಷಾ ದೇಖಾ?" ಎಂದು ಕೇಳಿ

ದರು. ಆಗ ಲಾಲಾಜಿ "ಸಬ್ ಹೀ ಆಪ್ಕಾ ಹೈ" ಎಂದಲ್ಲದೆ ಮತ್ತೇ ನನ್ನು ಹೇಳಬಹುದಾಗಿದ್ದಿತು ?

ಚಿತ್ರಬಂಧ

ಬಾಪುಜಿ ಆಶ್ರಮದಲ್ಲಿದ್ದಾಗ ಒಂದು ಸೋಮವಾರ ಅವರ ಬಳಿಗೆ ಯಾತ್ರೆಗೈದು ಒಂದು ಶಾಲೆಯ ವಿದ್ಯಾರ್ಥಿಗಳೂ ಉಪಾಧ್ಯಾಯರೂ ಬಂದರು. ಬಾಪುವಿನ ಸನ್ನಿಧಿಯಲ್ಲಿ ಸ್ವಲ್ಪ ಹೊತ್ತು ಕುಳಿತರು. ಹೊರಟುಹೋಗುವಾಗ ಉಪಾಧ್ಯಾಯರೊಬ್ಬರು ಕಡೆಮಾತಾಗಿ ವಿದ್ಯಾರ್ಥಿಗಳಿಗೇನಾದರೂ ಹೇಳಬೇಕೆಂದು ಬೇಡಿದರು. ಮೌನದ ದಿನವಾದುದರಿಂದ ಬಾಪು ಒಂದು ಕಾಗದದ ಚೂರನ್ನೆತ್ತಿಕೊಂಡು ಅದರಲ್ಲಿ,

ನೂಲು ಎಕ್ಕ ನೇಯಿ
ಎಕ್ಕ ನೂಲು ನೇಯಿ
ನೇಯಿ ಎಕ್ಕ ನೂಲು

ಎಂದು ಚಿತ್ರಪದ್ಯ ಬರೆದಂತೆ ಬರೆದುಕೊಟ್ಟು ನಕ್ಕರು. ಅಲ್ಲಿಯ ಹುಡುಗರೊಂದಿಗೆ ಇತರರೂ ಹುಡುಗರಾದಂತೆ ನಕ್ಕರು.

ಇನ್ಸ್ಪೆಕ್ಟರ್ ನೊಣ

ಹುಡುಗರನ್ನು ಮಾತನಾಡಿಸುವುದರಲ್ಲಿ ವಿನೋದವನ್ನು ಬೀರುತ್ತಿದ್ದ ಹಾಗೆಯೇ ಗಾಂಧೀಜಿಯವರು ಪಾಠವನ್ನೂ ಹೇಳಿಕೊಡುವರು. ನಂದೀದುರ್ಗದಲ್ಲಿ ಆರೋಗ್ಯಲಾಭಕ್ಕಾಗಿ ೧೯೨೭ರಲ್ಲಿದ್ದಾಗ ಅವರ ಬಿಡಾರದಲ್ಲಿ ಉಪಚರ್ಯೆಗೆಂದು ಬೆಂಗಳೂರಿನಿಂದ ಇಬ್ಬರಿಬ್ಬರು ತರುಣರು ಸರದಿಯಾಗಿ ಹೊರಟು ಅವರ ಸನ್ನಿಧಿಯನ್ನು ಅನುಭವಿಸುತ್ತಿದ್ದರು. ಗಾಂಧೀಜಿ ಬಂದ ಮೂರನೆದಿನ ಇಂತಹ ತರುಣರಲ್ಲೊಬ್ಬನು ನೀರಮನೆ ಹತ್ತಿರ ಸುಳಿದಾಡುತ್ತಿದ್ದು ಅವರ ದೃಷ್ಟಿಗೆ ಬಿದ್ದನು. ಕೂಡಲೇ ಹತ್ತಿರ ಕರೆದು ಮಾತನಾಡಿಸಿ ಅವನಾರು, ಏನು ಕೆಲಸ ಮಾಡುವುದು ಮುಂತಾಗಿ ಕೇಳಿದರು. "ನಾನೊಬ್ಬ ವಾಲಂಟಿಯರ್, ಮಹಾತ್ಮಾಜಿ"

"ಆ! ವಾಲಂಟಿಯರೇ! ಏನು ಕೆಲಸವನ್ನು ಮಾಡುವಿ ?"

"ಸ್ಯಾನಿಟೇಷನ್ ಕೆಲಸ, ಇನ್ನೂ...."

“ ಸ್ಯಾನಿಟರಿ ಕೆಲಸವೋ ? ಬಲು ಸಂತೋಷ. ನನಗಾಕೆಲಸವಲ್ಲಿ ಪರಿಶ್ರಮವಿದೆ. ಅವನ್ನು ಮರೆಯದಿರು. ನಿನ್ನ ಕೆಲಸ ಸಮರ್ಪಕವೋ ಇಲ್ಲವೋ ಆಗಾಗ್ಗೆ ನೋಡಲು ನಾನು ಸಿಐಡಿ ಇನ್ಸ್ಪೆಕ್ಟರುಗಳನ್ನು ಕಳುಹಿಸುತ್ತೇನೆ. ನಿನ್ನ ಕೆಲಸದಲ್ಲಿ ದೋಷವಿದ್ದಾಗ ಇನ್ಸ್ಪೆಕ್ಟರ್ ಕಾಣಿಸಿಕೊಳ್ಳುವನು ನನ್ನ ಇನ್ಸ್ಪೆಕ್ಟರ್ ಯಾರು ಗೊತ್ತೇ ? ”

“ ಇಲ್ಲ....”

“ ನೊಣಗಳು ! ಸ್ಯಾನಿಟರಿ ಕೆಲಸದಲ್ಲಿ ದೋಷವಿದ್ದಾಗಲೇ ನೊಣ ಬರುವುದು ”

ಇನ್ಸ್ಪೆಕ್ಟರ್ ನೊಣವೆಂದರ ನಗು. ನಗುವಿನ ಜೊತೆಯಲ್ಲಿ ಪಾಠ. ಸೂತ್ರದಂತಹ ವಾಕ್ಯ.

ಗಾನಶ್ರವಣ

ನಂದೀದುರ್ಗವನ್ನಿಳಿದು ಬೆಂಗಳೂರಿನ ಕುಮಾರಾ ಪಾರ್ಕಿನಲ್ಲಿ ಬಿಡದಿಯಾಯಿತು. ಆ ಸೌಧದ ಮಹಡಿಯ ಹಜಾರದ ಒಂದು ಮೂಲೆ ಮಾತ್ರ ಬಾಪುಜಿಯ ಬೈಠಕ್ಖಾನೆ. ಆಪ್ತೇಷ್ಟರೆಲ್ಲರೂ ಹೇಗಾದರೂ ಮಾಡಿ ಬಾಪುಜಿಯ ಚಿತ್ತವನ್ನು ಉಲ್ಲಾಸಗೊಳಿಸುವ ಉಪಾಯಗಳನ್ನು ಹೆಣೆಯಬೇಕಾಗಿದ್ದ ಕಾಲ. ಹಿಂದೆ ಅಹಮದಾಬಾದಿನಲ್ಲಿಯೂ ಬೆಳಗಾಂವಿಯಲ್ಲಿಯೂ ಆತನು ಕಂಡು ಕೇಳಿ ಸಂತೋಷಪಟ್ಟಿದ್ದ ಶ್ರೀ ರಾಜಮ್ಮನ ವೀಣೆಯನ್ನು ಒಂದು ದಿನ ಕೇಳಿಸಿದರು. ಆಕೆಯ ಗಾನದಲ್ಲಿ ಬಾಪುಜಿಗೆ ಇಷ್ಟ. ಒಂದು ಹೊತ್ತು ಆಕೆಯ ಹಾಡನ್ನು ಕೇಳಿದ ಮೇಲೆ ಬಾಪುಜಿ ಮತ್ತೊಂದು ದಿನ ಆಕೆ ಬಂದು ಹಾಡಬೇಕೆಂದು ಬಯಸಿದರು. ಮುಂದಿನ ಸೋಮವಾರ ಗೊತ್ತಾಯಿತು. ಮೌನದ ದಿನವಾದುದರಿಂದ ಚರಖಾ ತಿರುಗಿಸುತ್ತಲಿದ್ದಾಗಲೇ ಒಂದು ಗಂಟೆ ಕಾಲ ಶ್ರೀ ರಾಜಮ್ಮನ ಹಾಡು ಕೇಳುವುದೆಂದು ನಿಷ್ಕರ್ಷೆಯಾಯಿತು. ಸೋಮವಾರದ ಹೊತ್ತೂ ಬಂತು. ಹೊತ್ತಿಗೆ ಸರಿಯಾಗಿ ಹಾಡೂ ಪ್ರಾರಂಭವಾಯಿತು. ಬಾಪುಜಿ ಚರಖಾ ತಿರುಗಿಸುತ್ತ ಸಮಾಧಾನಚಿತ್ತರಾಗಿ ಕೇಳುತ್ತಿದ್ದರು. ಎರಡು ಹಾಡು ಮುಗಿದು ಮೂರನೆಯದು ನಡೆಯುತ್ತಿತ್ತು. ಆ ವೇಳೆಗೆ

ಕೊಟಡಿಯೊಳಕ್ಕೆ ಹರೀಂದ್ರನಾಥ ಚಟ್ಟೋಪಾಧ್ಯಾಯನೂ ಕಮಲಾದೇವಿಯೂ ಬಂದರು. ನಮಸ್ಕಾರಮಾಡಿ ಕುಳಿತರು. ಹರೀಂದ್ರನಾಥನು ತಂಬೂರಿಯನ್ನು ಹೊತ್ತುಕೊಂಡೇ ಬಂದಿದ್ದುದರಿಂದ ಆತ ಬಂದ ಉದ್ದೇಶವು ಸ್ಪಷ್ಟವಾಗಿಯೇ ಇತ್ತು. ಎದುರುಬದುರು ಸಂಗೀತಗಾರರು ಸಿದ್ಧರಾದ ಕಾಲ. ಸಂದರ್ಭವನ್ನು ಎಲ್ಲರಿಗಿಂತ ಮೇಲಾಗಿ ಮೌನದಿಂದ ಗ್ರಹಿಸಿದವರು ಬಾಪುಜಿ. ಶ್ರೀ ರಾಜಮ್ಮ ಬಾರಿಸುತ್ತಿದ್ದ

ನಲ್ಮೆಯ ತಾತ

ಹಾಡು ಮುಗಿದಕೂಡಲೇ ನಿಲ್ಲಿಸುವಂತೆ ಆಕೆಗೆ ಸಂಜ್ಞೆ, ಹರೀಂದ್ರನಾಥನಿಗೆ ಹಾಡಲು ಅನುಜ್ಞೆ. ಹರೀಂದ್ರನಾಥನ ಎರಡು ಹಾಡು ಆಯಿತು. ಆಗ ಪುನಃ ಶ್ರೀ ರಾಜಮ್ಮನಿಗೆ ಎರಡು ಹಾಡನ್ನು ಹಾಡಬೇಕೆಂದು ಸಂಜ್ಞೆ. ಈ ಕಡೆಯ ಎರಡು ಹಾಡಿಗೆ ಚರಖಾ ಸುತ್ತಾಟವಿಲ್ಲ. ಕಡೆಯ ಹಾಡು ಆಗುತ್ತಿದ್ದಾಗ ಬಾಪುಜಿ ಒಂದು ಚೂರು ಕಾಗದವನ್ನು ತೆಗೆದು ನಸುನಗುತ್ತ ಇಂಗ್ಲಿಷಿನಲ್ಲಿ ಎರಡು ಮೂರು ವಾಕ್ಯಗಳನ್ನು ಬರೆದು ಕಮಲಾದೇವಿಗೆ ತಲಪಿಸಿದರು. ಅವರ ಅನುವಾದ—

"ಈ ಒಂದು ಗಂಟೆಕಾಲ ನನ್ನ ಮನಸ್ಸಿಗೆ ಉಲ್ಲಾಸವನ್ನುಂಟುಮಾಡಿದ ಗಾಯಕರಿಬ್ಬರಿಗೂ ನನ್ನ ಕೃತಜ್ಞತೆ ಸಲ್ಲುವುದು. ಈ ಸಂದರ್ಭದಲ್ಲಿ ಇನ್ನೂ ಉಲ್ಲಾಸಜನಕವಾದ ಅಂಶವೊಂದುಂಟು. ಒಂದು ಕಡೆ ಹೆಂಡತಿಯ ಪ್ರೈಮುಖ್ಯವನ್ನು ಕಂಡು ಹಿಗ್ಗುವ ಪತಿಯಿದ್ದರೆ ಮತ್ತೊಂದುಕಡೆ ಪತಿಯ ನೈಪುಣ್ಯವನ್ನು ಕಂಡು ಆನಂದಿಸುವ ಹೆಂಡತಿಯಿರುವಳು. ಬೇಕಾದರೆ ಈ ಸ್ಥಿತಿಯನ್ನು ತಲೆ ಕೆಳಗುಮಾಡಬಲ್ಲವರು ನೀವು. ಇದರ ಅರ್ಥವನ್ನು ಈಕಡೆಯಿರುವ ನಿನ್ನ ತಂಗಿಗೆ ತಿಳಿಯಹೇಳುವುದು"

ಇವನ್ನೋದುತ್ತಿದ್ದ ಹಾಗೆಯೇ ಕಮಲಾದೇವಿಗೆ ನಗು ಬಂತು. ಆಕೆಯ ಮುಖವನ್ನೇ ನಿರೀಕ್ಷಿಸುತ್ತಿದ್ದ ಬಾಪುಜಿ ಆವೇಳೆಗೆ ಬಾಯಿ ತೆರೆದು ಕಿಲಕಿಲ ನಕ್ಕರು. ಮುದ್ದು ಮೊಮ್ಮಕ್ಕಳನ್ನು ಹಸೆಮೇಲೆ ಕೂರಿಸಿ ಹಾಸ್ಯದಿಂದ ನಲಿವ ತಾತಯ್ಯನಿಗೂ ಬಾಪುಜಿಗೂ ಆ ಕ್ಷಣದಲ್ಲಿ ಯಾವ ವ್ಯತ್ಯಾಸವೂ ತೋರಲಿಲ್ಲ.

ಸುತ್ತಮುತ್ತಲಿರತಕ್ಕವರ ಮನೋಗತವನ್ನರಿತುಕೊಳ್ಳುವುದರಲ್ಲಿ ಗಾಂಧೀಜಿಗೆ ಎಷ್ಟು ಸೂಕ್ಷ್ಮವೂ ವೇಗವೂ ಉಂಟೆಂಬುದನ್ನು ಎಲ್ಲರೂ ಕೇಳಿರುತ್ತಾರೆ. ಆ ಇಂಗಿತಜ್ಞತೆಯು ಎಷ್ಟು ಚುರುಕಾಗಿರುತ್ತದೆಯೋ ಅಷ್ಟೇ ಚುರುಕಿನಿಂದಿರುತ್ತದೆ ಅದರ ಜತೆಯಲ್ಲಿ ಓಡುವ ಹಾಸ್ಯದ ಗತಿ.

ಇಂಗಿತಜ್ಞತೆಯ ಲೀಲೆ

ಬಾಪುಜಿಯೊಡನೆ ಸಂಭಾಷಣೆಗೆಂದು ಹೊರಡತಕ್ಕವರು ಎಷ್ಟು ಎಚ್ಚರದಿಂದಿದ್ದರೂ ಕಡೆಗೆ ಅವರ ಎಚ್ಚರ ಸಾಲದೆ ಹೋಗುವುದು ಅಂತಸ್ತಿಗೆ ತಕ್ಕಂತೆ ಯಾರೊಡನೆ ಹೇಗೆ ಸರಸವಾಗಿ ಮಾತುಕಥೆಗಳನ್ನು ಬೆಳೆಸಬೇಕೋ ಯಾರೊಡನೆ ಹೇಗೆ ವಾದವನ್ನು ಮುಂದರಿಸಬೇಕೋ ಯಾರನ್ನು ಹೇಗೆ ಕೊಟ್ಟು ಕಳುಹಿಸಿಬಿಡಬೇಕೋ ಎಲ್ಲವೂ ಆತನಿಗೆ ಲೀಲಾಜಾಲ. ದೃಷ್ಟಾಂತವಾಗಿ ನಂದಿದುರ್ಗದಲ್ಲಿದ್ದಾಗಲೇ ಒಂದು ಸಾಯಂಕಾಲದ ಸರಸವನ್ನು ಕಾಣಬಹುದು.

೧೯೨೭ನೇ ಏಪ್ರಿಲ್ ತಿಂಗಳಲ್ಲಿ ದಕ್ಷಿಣ ಮಹಾರಾಷ್ಟ್ರದ ಸಂಚಾರದಲ್ಲಿದ್ದಾಗ ಗಾಂಧೀಜಿಗೆ ಆಕಸ್ಮಿಕವಾಗಿ ಒಂದು ಕೈ ನಿಶ್ಚೇಷ್ಟಿತವಾಗಿ ಎಲ್ಲರಿಗೂ ಯೋಚನೆ ತಟ್ಟಿತು. ಕೆಲವು ತಿಂಗಳನ್ನಾದರೂ ಕೇವಲ ವಿಶ್ರಾಂತಿಗಾಗಿಯೇ ನಂದಿದುರ್ಗದ ಮೇಲೆ ಕಳೆಯತಕ್ಕದೆಂದು ನಿಶ್ಚಯವಾಯಿತು. ಪುಣೆಕಡೆಯಿಂದ ಬೆಂಗಳೂರಿಗೆ ಬರುವ ರೈಲುಗಾಡಿಯ ಮೂರನೆ ತರಗತಿಯಲ್ಲಿ ಸುಮಾರು ೧೮ ಗಂಟೆಕಾಲ ಪ್ರಯಾಣಮಾಡಿಸಿ ಶ್ರೀ ರಾಜಾಜಿ, ಮಹಾದೇವಭಾಯಿ, ದೇವದಾಸಗಾಂಧೀ, ಪ್ಯಾರೆಲಾಲ, ಗಂಗಾಧರರಾವ್ ದೇಶಪಾಂಡೆಯವರು ಬಾಪುಜಿ ಕಸ್ತೂರಿಬಾಯಿಯಿಬ್ಬರನ್ನೂ ಯಶವಂತಪುರದಲ್ಲಿಳಿಸಿ ಅಲ್ಲಿಂದ ಮೋಟಾರಿನಲ್ಲಿ ನಂದಿದುರ್ಗಕ್ಕೆ ಕರೆದೊಯ್ದರು. ಅಲ್ಲಿ ಕನ್ನಿಂಘಂ ಬಂಗಲೆಯೆಂಬುದು ಅವರಿಗೆ ಬಿಡಾರವಾಗಿ ಏರ್ಪಟ್ಟಿತ್ತು. ಆ ಹೊತ್ತು ಮಧ್ಯಾಹ್ನ ಬಾಪುಜಿಯವರಿಗೆ ತಲೆನೋವು. ಅದರ ಪರಿಹಾರಕ್ಕಾಗಿ ಕೆಮ್ಮಣ್ಣಿನ ಕಿರೀಟವನ್ನು ತಲೆಗಂಟಿಸಿಕೊಂಡು ಅವಿರತವಾಗಿ ಚರಖದಿಂದ ನೂಲುತ್ತಲೇ ಇದ್ದರು. ಸಂಜೆ ಸುಮಾರು ಆರುಮುಕ್ಕಾಲು ಗಂಟೆಗೆ ಅವರ ಕೊಟಡಿಯ ಮುಂಭಾಗದ ಅಂಗಳದಲ್ಲಿ ಪ್ರಾರ್ಥನೆಗಾಗಿ ಅಲ್ಲಿದ್ದ ಹತ್ತು ಹದಿನೈದು

ಮುಂದೆ ನೆರೆದರು. ಅಂಗಳದ ಒಂದಂಚಿನಲ್ಲಿ ಮಾತ್ರವೇ ಮೇಲ್ಚಾವಣಿಯಿತ್ತು; ಉಳಿದ ಬಯಲಿನ ಸುತ್ತ ಕೈಗೋಡೆಮಾತ್ರವಿದ್ದು ಆಕಾಶವೇ ಚಾವಣಿಯಾಗಿತ್ತು.

ಪ್ರಾರ್ಥನೆ ಮುಗಿಯಿತು. ಆ ವೇಳೆಗೆ ಇಬ್ಬರು ದೊಡ್ಡ ಮನುಷ್ಯರು ಬಂದು ಸ್ವಲ್ಪ ಹೊತ್ತು ಮಾತನಾಡಿ ಹೊರಟರು. ಮಾತಿನ ವಿಷಯವಿನ್ನೇನೂ ಇಲ್ಲ—ನಂದಿದುರ್ಗದ ಆರೋಗ್ಯ, ಎತ್ತರ, ಆ ಅಂಗಳದಿಂದ ಕಾಣಬಹುದಾದ ಕೆರೆಗಳು. ಆ ಮಾತು ಬೆಳೆಯುತ್ತಿದ್ದ ಹಾಗೆಯೇ ಬಾಪುಜಿ "ದೃಶ್ಯ ಚನ್ನಾಗಿದೆ. ಬೆಟ್ಟದ ಮೇಲಿನಿಂದ ಆಕಾಶವೆಷ್ಟು ದೊಡ್ಡದೆಂದು ಮನಗಾಣಬಹುದು. ಈ ಅಂಗಳದಲ್ಲಿಯೇ ಮಲಗಿದರೆ ಚನ್ನಾಗಿರಬಹುದು" ಎಂದರು.

ತಕ್ಷಣವೇ ಎಲ್ಲರ ಮನಸ್ಸಿಗೂ ಭಯದ ಯೋಚನೆ ತಟ್ಟಿತು. ರಾತ್ರಿ ಆ ಬಯಲಿನಲ್ಲಿ ಮಲಗಿಕೊಳ್ಳುವ ನಿಶ್ಚಯವನ್ನು ಬಾಪುಜಿ ಮಾಡಿಬಿಟ್ಟರೆ ಅದರಿಂದ ಅವರ ಆರೋಗ್ಯ ಕೆಟ್ಟೀತೋ ಏನೋ! ನಿಶ್ಚಯ ಮಾಡಿದ್ದೇ ಆದರೆ ಆತನ ನಿಶ್ಚಯವನ್ನು ತಪ್ಪಿಸಲು ಯಾರಿಗೆ ಸಾಧ್ಯ! ಈ ಬಗೆಯ ಕಳವಳವು ಎಲ್ಲರಲ್ಲಿಯೂ ಏಕಕಾಲದಲ್ಲಿ ಹುಟ್ಟಿ ಎಲ್ಲರ ಪ್ರಯತ್ನವೂ ಅಂತಹ ನಿಶ್ಚಯರೂಪಗೊಳ್ಳದಂತೆ ತಡೆಯುವುದರಲ್ಲಿ ನಾಗಿತು. ಉಪಾಯವಾಗಿ ಮಾತು ಬೆಳೆಸುತ್ತ ದೇವದಾಸ, ಪ್ಯಾರೆಲಾಲ, ರಾಜಾಜಿ ಮುಂತಾದವರು ತಮ್ಮ ಚಾತುರ್ಯವೆಲ್ಲವನ್ನೂ ವೆಚ್ಚಮಾಡಿದರು.

**ಮೌನದ ಪಿತೂರಿ**

ಒಬ್ಬರು—"ಬಯಲು. ರಾತ್ರಿ ಹೊತ್ತು ಚಳಿ ಗಾಳಿ ಹೆಚ್ಚಾಗಿ ಬೀಸಿದರೂ ಬೀಸಬಹುದು"

ಬಾಪು—"ಹೊದ್ದುಕೊಂಡ ಮೇಲೇನು ಚಿಂತೆ? ಈಗ ಬೇಸಿಗೆ ಕಾಲವಲ್ಲವೇ? ಚಳಿಯೇಕಾಗುವುದು?"

ಈ ಸಬಬು ಹಾಳಾಯಿತು. ಆಗ ಪ್ಯಾರೆಲಾಲನು ವಿನಯದಿಂದ "ಈ ರಾತ್ರಿ ನಮ್ಮಲ್ಲೊಬ್ಬರು ಮಲಗಿ ಹೇಗಿರುವುದೋ ನೋಡೋಣ. ಏನೂ ತೊಂದರೆಯಿಲ್ಲದಿದ್ದರೆ ನಾಳೆ ರಾತ್ರಿ........"

ಬಾಪು—“ ನೀವೆಲ್ಲರೂ ಜತೆಯಲ್ಲಿಯೇ ಮಲಗಿಕೊಳ್ಳಬಹುದು. ಒಬ್ಬರು ಮಾತ್ರವೇ ಏಕೆ? ”

ಇದೂ ಹಾಳಾಯಿತು. ಆಗ ಕಸ್ತೂರಿಬಾಯಿ ದೇವದಾಸರಿಬ್ಬರೂ ಗುಜರಾಥಿಯಲ್ಲಿ ಮಾತಿಗೆ ತೊಡಗಿ ಏನೇನೋ ಹೇಳಿದರು. ಅವರು ಹೇಳಿದುದಕ್ಕೆಲ್ಲ ತಕ್ಕ ಜವಾಬು ಬಾಪುಜಿಯಿಂದ ಬರುತ್ತಲೇ ಇತ್ತು. ಅಷ್ಟು ಹೊತ್ತೂ ಉಪಾಯನಿಪುಣರಾದ ರಾಜಾಜಿಯವರು ಮಾಡುತ್ತಿದ್ದುದೇನು? ಬಯಲಿನಂಚಿನಲ್ಲಿದ್ದ ಕೈಗೋಡೆಯ ಎತ್ತರವನ್ನು ಅಳತೆ ಮಾಡುತ್ತ ಗಂಗಾಧರರಾಯರೊಡನೆ ಆಲೋಚನೆಯನ್ನು ನಟಿಸುತ್ತಿದ್ದರು. ಅದನ್ನು ಕಂಡು

ಬಾಪು—“ ಏನು ರಾಜಾಜಿ? ಏನು ನೀವು ಮಾಡುತ್ತಿರುವುದಲ್ಲಿ? ”

ರಾಜಾಜಿ—“ ಅಳತೆಯಿಟ್ಟು ನೋಡುತ್ತಿದ್ದೆ. ಈ ಕೈಗೋಡೆಯೂ ಆ ಕಿಟಕಿಯ ತಳಭಾಗವೂ ಒಂದೇ ಎತ್ತರ. ಆದ್ದರಿಂದ ಬಯಲಿನಲ್ಲಿ ಬೀಸಿದ ಗಾಳಿಯೆಲ್ಲವೂ ಕಿಟಕಿ ಮೂಲಕ ಕೊಟಡಿಯೊಳಕ್ಕೆ ಬಂದೇ ಬರುವುದು ”

ಬಾಪು—“ ಗಾಳಿ ಹೆಚ್ಚಾಗಿ ಬೀಸುವ ವಿಚಾರವಲ್ಲ. ಆಕಾಶದ ಕೆಳಗೆ ಮಲಗಿದರೆ ನಕ್ಷತ್ರಲೋಕವನ್ನು ಕಾಣುತ್ತ ಅನಂತದೃಶ್ಯವನ್ನು ಅನುಭವಿಸಬಹುದು. ಅದಕ್ಕಾಗಿ ಬಯಲಿನಲ್ಲಿ ಮಲಗಬೇಕೆನ್ನಿಸುತ್ತದೆ ”

ತೂರಿಕೊಂಡು ಹೋಯಿತು ಉಪಾಯಗಳೆಲ್ಲ! ರಾಜಾಜಿಯ ಉಪಾಯವೂ ವ್ಯರ್ಥವಾಯಿತು. ಮೌನದಿಂದಲೇ ಒಬ್ಬರ ಮನಸ್ಸನ್ನೊಬ್ಬರು ಅರಿತು ಒಬ್ಬೊಬ್ಬರಾಗಿ ಒಂದೊಂದನ್ನಾಗಿ ಜಾಣತನದಿಂದ ಕಟ್ಟಿದ ನಿವಾರಕೋಪಾಯಗಳ ಬಲೆಯಲ್ಲಿ ಬಾಪು ಸಿಕ್ಕಿಕೊಳ್ಳಲೇ ಇಲ್ಲ. ತನ್ನ ಮುಂದೆ ಚಿಲಿಪಿಲಿಗುಟ್ಟುತ್ತ ಓಡಾಡುವ ಇಲಿಗಳನ್ನು ಕಂಡು ಬೆಕ್ಕು ಚಲ್ಲಾಟವಾಡಿದಂತೆ ಗಾಂಧೀಜಿಯವರು ಇವರ ಪಿತೂರಿಯನ್ನರಿತು ಅರಿಯದವರಂತೆಯೇ ಮಾತಿಗೆ ತಕ್ಕ ಮಾತನ್ನು ಹೇಳುತ್ತ ಮೃದುತನದಿಂದಲೇ ಪಿತೂರಿಯನ್ನು ಮಾಯವಾಡಿದರು. ಇನ್ನು ಮಾಡತಕ್ಕು

ದೇನು? ಅಂಗಲಾಚಿ ಬೇಡಿಕೊಳ್ಳುವುದೊಂದೇ ಗತಿ. ಆಗ ಮಹಾದೇವ ದೇಸಾಯಿಯು ನಡುಕಗೂಡಿದ ಸ್ವರದಿಂದ "ಬಾಪುಜಿ, ನಮಗೆಲ್ಲರಿಗೂ ಯೋಚನೆಯಾಗಿದೆ. ತಮ್ಮ ಈಗಿನ ಸ್ಥಿತಿಯಲ್ಲಿ ತಾವು ಕೊಟಡಿಯೊಳಗೇ ಮಲಗಬೇಕು" ಎಂದರು. ಆಗ ನಗುತ್ತ ಬಾಪುಜಿ "ನೀವೆಲ್ಲರೂ ಆ ರೀತಿ ಯೋಚನೆಗೆ ಸಿಕ್ಕಿ ಪ್ರೀತಿಯಿಂದ ಹೇಳುವಾಗ ಒಪ್ಪಿಕೊಳ್ಳುತ್ತೇನೆ. ನಿಮ್ಮ ಮಾತಿನಂತೆಯೇ ಆಗಲಿ. ಆದರೆ ಆಕಾಶದ ಕೆಳಗೆ ಮಲಗಿದಾಗ ಉಂಟಾಗುವ ಚಿತ್ತಶುದ್ಧಿಯು ನಿಜವಾಗಿ ಬಯಸತಕ್ಕದ್ದು"

ಉಪಾಯಗಳ ಬಲೆಗೆ ಸಿಕ್ಕಿ ಬೀಳದಾತನು ಪ್ರೀತಿಯ ಪ್ರಾರ್ಥನೆಗೆ ಸುಲಭವಾಗಿ ವಶವಾದನು.

**ಛೀಕಾರ ನೀತಿ**

ತಪ್ಪನ್ನು ತಿದ್ದುವಾಗ ಅಪಹಾಸ್ಯಮಾಡಿ ಅವಮಾನ ತಂದಿಡುವುದು ಸರ್ವಸಾಮಾನ್ಯಚರ್ಯೆಯಷ್ಟೆ. ಅಪಹಾಸ್ಯವೆಂಬ ಶಬ್ದದಿಂದಲೇ ಅವಮಾನ ತರುವ ಲಕ್ಷಣವು ಪ್ರಕಟವಾಗುವುದು. ಆದರೆ ಮತ್ತೊಬ್ಬರಿಗೆ ನೋವನ್ನು ಕೊಡುವುದಾದರೆ ಉತ್ತಮವರ್ಗದ ಹಾಸ್ಯವೆನಿಸಲಾರದು. ಅಹಿಂಸೆಯೇ ಪರಮತತ್ತ್ವವೆಂದು ತ್ರಿಕರಣಶುದ್ಧಿಯಾಗಿ ಆಚರಣೆಯಲ್ಲಿಟ್ಟುಕೊಂಡಿರುವ ಗಾಂಧೀಜಿ ತಪ್ಪನ್ನು ತಿದ್ದುವ ಸಂದರ್ಭದಲ್ಲಿ ಹಾಸ್ಯಮಾಡುವುದಿಲ್ಲವೇ? ತಪಸ್ವಿಗಳ ಗುಂಪಿಗೆ ಸೇರಿದವರಾಗಿ ಕಠಿಣ ವ್ರತಗಳನ್ನು ಪ್ರತಿಕ್ಷಣದಲ್ಲಿಯೂ ನಡೆಸುತ್ತಲಿರತಕ್ಕವರು ತಮ್ಮ ಆಪ್ತ ಶಿಷ್ಯವರ್ಗದವರಲ್ಲಿ ವಿಶ್ವಾಮಿತ್ರ ದೂರ್ವಾಸಾದಿಗಳಂತೆ ಕೋಪವನ್ನು ತೋರದಿದ್ದರೂ ಕಾಠಿನ್ಯ ನಿಷ್ಠುರತೆಗಳನ್ನು ತೋರಬಹುದಲ್ಲವೇ? ಗಾಂಧೀಜಿಯವರಲ್ಲಿ ನಿಷ್ಠುರತಾಕಾಠಿನ್ಯಗಳಿಲ್ಲದೆ ಇಲ್ಲ. ಮತ್ತೊಬ್ಬರಿಗೆ ನೋವನ್ನುಂಟುಮಾಡದ ರೀತಿಯಲ್ಲಿ ಅವರು ಕಾಠಿನ್ಯ ವಹಿಸುವುದು ಹೇಗೆಂದು ವಿಚಾರಿಸಿದಾಗ ಕಾಣುವ ಲಕ್ಷಣವು ಬೇರೆ. ಕಾಠಿನ್ಯ ಕಾಣುವುದು ಅವರು ಇಷ್ಟಪಟ್ಟು ಹೇಳಿದ ಮಾತಿನಲ್ಲಿರುವುದಿಲ್ಲ. ಅವರು ಹೇಳಿದ ಮಾತು ಸತ್ಯವಾದುದರಿಂದ ಕಠಿನವಾಗಿರುವುದು. ಮೃದುತ್ವವೇ ಕಾಠಿನ್ಯವಾಗುವುದು. ಮೃದುತ್ವವೇ ಅವರ ರೀತಿಯ ಸಹಜ ಗುಣ. ಆದುದರಿಂದ ಸಂದರ್ಭಾನುಸಾರವಾಗಿ ಕಾಠಿನ್ಯವು ಮೃದುತನವನ್ನು ತಾಳುವುದೂ

ಉಂಟು, ಮೃದುತನವೇ ಕಾಠಿನ್ಯವನ್ನು ತಾಳುವುದೂ ಉಂಟು. ಹೇಗಿದ್ದರೂ ಸತ್ಯಕ್ಕೂ ಅಹಿಂಸೆಗೂ ಒಳಗಾಗಿರುವುದೇ ವಿನಾ ಎಳ್ಳಷ್ಟಾದರೂ ಹೊರಗಾಗಿರುವುದಿಲ್ಲ. ಆದುದರಿಂದ ತಪ್ಪನ್ನು ತೋರಿ ತಿದ್ದುವಂತಹ ಸಂದರ್ಭಗಳಲ್ಲಿ ಬಾಪುಜಿ ಆಡುವ ಮಾತಿನಲ್ಲಿ ಹಾಸ್ಯವಿದ್ದರೂ ಅಪಹಾಸ್ಯ ತೋರುವುದಿಲ್ಲ. ಛೀಕಾರಕ್ಕೆ ಸಿಕ್ಕಿಕೊಂಡವರು ಅವಮಾನದಲ್ಲಿ ಸಿಕ್ಕಿಕೊಳ್ಳದೆ ನಗುವಿನ ಅಲೆಯಲ್ಲಿ ಸಿಕ್ಕಿಕೊಳ್ಳುವರು; ಇಲ್ಲವೆ ತಮ್ಮ ಅನರ್ಹತೆಯನ್ನು ಕಂಡ ಖೇದದಲ್ಲಿ ಸಿಕ್ಕಿ ಚಿತ್ತಶುದ್ಧಿಯನ್ನು ಪಡೆಯುವರು. ನಗುವಿನಿಂದಲೇ ತಮ್ಮ ತಪ್ಪನ್ನು ಕಂಡು ಮೇಲನ್ನು ಹೊಂದುವರು.

ದುರ್ವಿದಗ್ಧತೆ

ಯಾವುದಾದರೂ ವಿಷಯವನ್ನೆತ್ತಿ ವಾದಮಾಡಲು ಬಾಪುಜಿಯ ಬಳಿಗೆ ಬರುವ ಜನರ ಸಂಖ್ಯೆಗೆ ಗೊತ್ತುಗುರಿಯಿರುವುದೇ? ವಾದ ಬೆಳೆಸಬಯಸುವವರು ಆ ವಿಷಯದಲ್ಲಿ ಪರಿಶ್ರಮವುಳ್ಳವರಾಗಿದ್ದರೆ ವಾದವು ಸಮರ್ಪಕ ರೀತಿಯಲ್ಲಿ ನಡೆಯಬಹುದು. ಪರಿಶ್ರಮಲೇಶವೂ ಇಲ್ಲದೆ ಅಲ್ಪಸ್ವಲ್ಪ ಪರಿಚಯ ಮಾತ್ರದಿಂದ ಸಾಹಸಗೊಂಡು ವಾದಕ್ಕೆ ತೊಡಗಿದವರೊಂದಿಗೆ ಸಮಾಧಾನದಿಂದ ಚರ್ಚೆ ಬೆಳಸಲು ಯಾರಿಗೆ ಸಾಧ್ಯ? "ಜ್ಞಾನಲವ ದುರ್ವಿದಗ್ಧಂ ಬ್ರಹ್ಮಾಪಿ ನರಂ ನ ರಂಜಯತಿ" ಯೆಂಬುದು ಸರ್ವಕಾಲ ದೇಶವರ್ತಮಾನಗಳಲ್ಲಿಯೂ ಅನುಭವಸಿದ್ಧವಾದುದು. "ನಿಮಗೆ ಈ ವಿಷಯದಲ್ಲಿ ಪರಿಶ್ರಮವಾಗಲಿ ಅನುಭವವಾಗಲಿ ಸಾಲದು. ದಯವಿಟ್ಟು ವಿಷಯವನ್ನು ಚನ್ನಾಗಿ ತಿಳಿದುಕೊಂಡು ಬನ್ನಿ" ಎಂಬುದೇ ಆ ಸಂದರ್ಭದಲ್ಲಿ ವಿನಯೋಕ್ತಿಗೆ ಪರಮಾವಧಿ. ಅಷ್ಟು ವಿನಯವನ್ನು ವಹಿಸುವುದಕ್ಕೂ ಎಷ್ಟು ದಾಂತಿ ಬೇಕು! ಇಂತಹ ವಿನಯದೊಂದಿಗೆ ಉಲ್ಲಾಸಾಹ್ಲಾದಗಳನ್ನೂ ಬೀರುವುದು ಗಾಂಧೀಜಿಯ ವಿಶೇಷ. ವಿಷಯಚರ್ಚೆಗೆಂದು ಮೊದಲಿಟ್ಟು ಕಾಲಹರಣಮಾಡುವವರ ವ್ಯರ್ಥ ಮಾತುಗಳನ್ನು ನಿಲ್ಲಿಸಿ ಬೀಳ್ಕೊಡುವ ಸಂದರ್ಭಗಳಲ್ಲಿ ಬಾಪುಜಿಯವರು ಹಾಸ್ಯವನ್ನು ತಾಳುವರು. ಬಾಪುಜಿಯವರ ಅನುಭವ ಯಾರಿಗುಂಟು? ಅವರ ಜೀವನ ಚರಿತ್ರೆಯನ್ನು ದೂರದಿಂದ ತಿಳಿಯುವಷ್ಟರಲ್ಲಿಯೇ

ಎಷ್ಟು ಉದ್ಯೋಗಗಳಲ್ಲಿ ಅವರು ಪರಿಣತರೆಂಬುದು ಅಚ್ಚರಿಯನ್ನುಂಟು ಮಾಡುವುದು. ವಕೀಲಿಯಾಯಿತು, ಆಸ್ಪತ್ರೆಯಲ್ಲಿ ಉಪಚರ್ಯೆ ಯಾಯಿತು, ರೋಗಚಿಕಿತ್ಸೆಯಾಯಿತು, ಆಹಾರಶಾಸ್ತ್ರ ಶೋಧನೆ ಯಾಯಿತು, ಭಂಗಿ ಕೆಲಸವಾಯಿತು, ಬಾಣಸಿಗನ ವೃತ್ತಿಯಾಯಿತು, ಅಗಸನ ಉದ್ಯೋಗವಾಯಿತು, ಸಾಯಿಂದನ ನೈಪುಣ್ಯ

ಅನುಭವ ಧನ

ಸಂಪಾದನೆಯಾಯಿತು, ಚಮ್ಮಾರನ ಕಸಬಾಯಿತು, ಉಪಾಧ್ಯಾಯನ ಕಷ್ಟಗಳನ್ನನುಭವಿಸಿದ್ದಾಯಿತು, ತೋಟದ ಮಾಲಿಯ ಅನುಭವವನ್ನು ಪಡೆದದ್ದಾಯಿತು, ರೈತನ ದಿನ ಚರ್ಯೆಯಾಯಿತು, ನೂಲುವುದಾಯಿತು, ನೇಯುವುದಾಯಿತು, ಉಪ ವಾಸವ್ರತ ಪಾಲನೆಯು ಬಾರಿಬಾರಿಗೂ ಆಯಿತು, ನಾನಾ ಜೈಲುಖಾನೆ ಗಳಲ್ಲಿ ಖೈದಿಯ ವರ್ತನೆಯಾಯಿತು, ಸಭಾ ಸಮ್ಮೇಳನಗಳಲ್ಲಿ ಪ್ರತೀ ಹಾರಿತನದಿಂದ ಅಧ್ಯಕ್ಷತನದವರೆಗೂ ಆಯಿತು, ವಿವಿಧ ವಿಚಾರಗಳಲ್ಲಿ ಪಂಚಾಯತನ ವಿಚಕ್ಷಣೆಯನ್ನು ಅಭ್ಯಾಸ ಮಾಡಿದ್ದಾಯಿತು, ಪತ್ರಿಕೆಯ ಸಂಪಾದಕತನದ ಭಾರವನ್ನು ಹೊತ್ತುದಾಯಿತು, ಸಮಸ್ತ ಭಾರತ ವರ್ಷಕ್ಕೆ ದಿವ್ಯ ಪ್ರತಿನಿಧಿಯಾದುದೂ ನಡೆಯಿತು. ಆತನ ಸಂಚಾರ ವೆಷ್ಟು, ಪರಿಚಿತರೆಷ್ಟು, ಅನುಭವವೆಷ್ಟು, ವ್ರತಗಳೆಷ್ಟೆಂದು ಎಣಿಸಲು ಸಾಧ್ಯವೇ? ಆತನ ಮನಸ್ಸೆಷ್ಟು ದೊಡ್ಡದೆಂದೂ ಎಷ್ಟು ಪರಿಣತವೆಂದೂ ಅಳೆಯಲು ನಮಗೆ ಸಾಧ್ಯವೇ? ಅಷ್ಟು ವಿದಗ್ಧತೆಯು ಮಾನವ ಸಾಧ್ಯವೇ?

ಮೇರುಪರ್ವತದೆದುರಿಗೆ ಶೀಗೇ ಗುಡ್ಡವು ಹಾಗೂ ಹೀಗೂ ಕುಪ್ಪ ಳಿಸಿಕೊಂಡುಬಂದು ಕುಳಿತಂತೆ ಬಾಪುಜಿಯೊಡನೆ ಚರ್ಚೆಗೆಂದು ಜ್ಞಾನ ಲವದುರ್ವಿದಗ್ಧರು ಮುಂಡಿಸಿದಾಗ ಹಲಕೆಲವು ನಿಮಿಷಗಳಕಾಲ ಪ್ರಶ್ನೋ ತ್ತರಗಳು ನಡೆಯುತ್ತವೆ. ಅಷ್ಟರೊಳಗೆ ವಾದವು ಸಾರ್ಥ

ಕವಿಗಳು!

ಕವೋ ವ್ಯರ್ಥವೋ ಗೊತ್ತಾಗಿ ಹೋಗುತ್ತದೆ. ಬಂದ ವರು ವಾದಮಾಡುತ್ತ ಅಪ್ರಕೃತವಾದ ಮಾತನ್ನೋ ವಿಚಾರಹೀನವಾದ ಮಾತನ್ನೋ ಆಡುವರು. ಆಗ ಮಂದಹಾಸದಿಂದ ಬಾಪುಜಿ "ಆ! ನೀವೆಷ್ಟಾದರೂ ಕವಿಗಳು!" ಎನ್ನುವರು. ಮಾತು

ಬೇರೆಯಾಗಿ ಬದಲಾಗುವುದು. ಬಾಪುಜಿಮುಖದಿಂದ ಕವಿಯೆನಿಸಿಕೊಂಡುದೇ ಶೀಗೇ ಗುಡ್ಡಕ್ಕೆ ತೃಪ್ತಿಯನ್ನುಂಟುಮಾಡಿದರೆ ಸಾಷ್ಟಾಂಗವಿಟ್ಟು ಮೈಯುಬ್ಬಿ ಹೊರಡುವುದು ಒಂದು ರೀತಿ. ಸಹಜ ಬುದ್ಧಿಗೆ ಯಾವ ಮಾಂದ್ಯವೂ ಹಿಡಿಯದಿದ್ದರೆ "ನೀವು ಕವಿಗಳು, ಕವಿಗಳಿಗೆ ಈ ವಿಷಯದಲ್ಲಿ ಅನುಭವವಿರುವುದಿಲ್ಲ. ಆದ್ದರಿಂದ ಈ ವಿಷಯದ ಗೋಜು ನಿಮಗೇಕೆ, ಬಿಡಿ" ಎನ್ನುವ ಅರ್ಥವನ್ನು ಅಂತರಂಗದಲ್ಲಿ ಗ್ರಹಿಸಿ ಸ್ವಲ್ಪಮಾತ್ರವಾದರೂ ಚಿತ್ತಶುದ್ಧಿಯನ್ನು ಪಡೆಯುವುದು ಮತ್ತೊಂದು ರೀತಿ.

ವೇಳಾಪ್ರಜ್ಞೆಯೆಂಬುದು ಭಾರತೀಯರಿಗೆ ಸ್ವಪ್ನಪ್ರಾಯವೆಂಬ ಭಾವನೆಯಿಂದ ಪ್ರತಿಶಾಲೆಯಲ್ಲಿ ತತ್ಸಂಬಂಧವಾದ ಉಪನ್ಯಾಸಗಳೂ ಪ್ರತಿ ಪಠ್ಯಪುಸ್ತಕದಲ್ಲಿ ಪಾಠಗಳೂ ಉಂಟಷ್ಟೆ. ವೇಳಾಪ್ರಜ್ಞೆಯು ಅನವಶ್ಯವೆಂದಾಗಲಿ ಭಾರತೀಯರಿಗೆ ಹುಟ್ಟುಗುಣವೆಂದಾಗಲಿ ಹೇಳುವ ಉದ್ದೇಶವಿಲ್ಲ. ಅದರ ವಿಚಾರವು ಪ್ರಸಕ್ತವೂ ಅಲ್ಲ. ಆದರೆ ಒಂದು ವಿಚಿತ್ರಾಂಶವನ್ನು ಗಮನಕ್ಕೆ ತಂದುಕೊಳ್ಳಬಹುದು.

**ವಕ್ರಲೀಲೆ**

ವೇಳಾಪ್ರಜ್ಞೆಗೆ ದಾಸರಾದವರು ಸಹನದಿಂದ ಕಾದಿರಲರಿಯರು. ಒಂದೆರಡು ನಿಮಿಷ ಹೆಚ್ಚುಕಡಿಮೆಯಾದರೆ ಹಿಂಸೆಯಿಂದ ಹುಟ್ಟಿದ ಒಂದು ಬಗೆಯ ಲೀಲೆಯು ತೋರಿಕೊಳ್ಳುವುದು. ಹುಚ್ಚಲ್ಲ ಬೆಪ್ಪಲ್ಲ ಶಿವಲೀಲೆಯೆಂದೆನ್ನಿರಿ; ನಿಮಗಿಷ್ಟ ಬಂದ ಹೆಸರಿನಿಂದ ಅದನ್ನು ಕರೆಯಿರಿ. ಆ ಲೀಲೆಯು ಅಂತಸ್ಥನ್ನನುಸರಿಸಿ ನಮ್ರತೆಯಿಂದಲೋ ಧೂರ್ತತೆಯಿಂದಲೋ ರಾರಾಜಿಸುವುದು.

ಗಾಂಧೀಜಿಯವರ ವೇಳಾಪ್ರಜ್ಞೆಯು ಪ್ರಸಿದ್ಧವಾದ ಅಂಶ. ವೇಳಾತಿಕ್ರಮವಾದಾಗ ಕಾಲನಷ್ಟವಾಯಿತೆಂಬ ವ್ಯಸನವು ಗಾಂಧೀಜಿಯವರಿಗೂ ಉಂಟು. ವೇಳಾಪ್ರಜ್ಞೆಯನ್ನು ಪಡೆಯದಿರತಕ್ಕ ಮುಗ್ಧ ಕೋಟಿ ಬಡಪಾಯಿಗಳಿಗೆ ಕಾದಿರುವ ಸೈರಣೆಯು ಅಪಾರವಾಗಿರುವುದರಿಂದ ಅಂತಹ ವ್ಯಸನವಿಲ್ಲದಿರಬಹುದು. ಅಂತಹವರ ಪ್ರೀತಿವಿಶ್ವಾಸಗಳನ್ನು ಗಂಟುಕಟ್ಟಿಕೊಂಡಿರುವ ಗಾಂಧೀಜಿಗೆ ಅವರ ದೆಸೆಯಿಂದ ಕಾಲನಷ್ಟಜನಿತ ವ್ಯಸನವು ಈ ರೀತಿಯಲ್ಲಿ ತೋರುವುದಿಲ್ಲ. ವೇಳಾಪ್ರಜ್ಞೆ

ತಮಗುಂಟೆಂದು ಯಥಾವಕಾಶವಾಗಿ ಬೀಗುವ ಜನರಿಂದ ತಡವಾದಾಗ ಅಂತಹವರನ್ನು ಹಿಯ್ಯಾಳಿಸಲು ಕಾರಣವೂ ಅಧಿಕಾರವೂ ಉಂಟು. ಪುಣೆಯಲ್ಲಿ ದೊಡ್ಡ ಸಂಸ್ಥೆಯ ಕಾರ್ಯದರ್ಶಿಗಳೊಬ್ಬರು ಪಾಶ್ಚಾತ್ಯ ರಂತೆಯೇ ಕ್ರಮವರಿತು ಕೆಲಸಮಾಡುವ ಅಭ್ಯಾಸವನ್ನು ವ್ರತದಂತೆ ಪಾಲಿಸತಕ್ಕವರು ಒಂದು ಸಲ ಬಾಪುಜಿ ಬಳಿಗೆ ಮಧ್ಯಾಹ್ನ ೩ ಗಂಟೆಗೆ ಬರುವುದಾಗಿ ಗೊತ್ತುಮಾಡಿಕೊಂಡಿದ್ದರು. ೩ ಗಂಟೆ ಯಾಯಿತು; ಅವರು ಬರಲಿಲ್ಲ. ಅತ್ತಲಾಕಾರ್ಯದರ್ಶಿ ಗಳಿಗೆ ಯಾವುದೋ ಅನಿವಾರ್ಯ ತೋರಿ ತಡ ವಾಯಿತು. ೩ ಗಂಟೆಯಾದ ಐದಾರು ನಿಮಿಷಗಳಿಗೆ ಬಂದರು. ಬರುವಾಗಲೇ ಕ್ಷಮೆ ಬೇಡಲು ಸಿದ್ಧರಾಗಿದ್ದರು. ಚಿರಪರಿ ಚಿತರಾದುದರಿಂದ ಸಲಿಗೆಯ ಅಧಿಕಾರವುಳ್ಳ ಗುಂಪಿನವರು. ಮೊದಲ ಮಾತಾಗಿ " ಕ್ಷಮಿಸಬೇಕು, ಅಪರಾಧವಾಯಿತು " ಎಂದರು. ಬಾಪುಜಿ " ವೇಳೆಗೆ ಸರಿಯಾಗಿ ನಿಮ್ಮನ್ನೆದುರು ನೋಡಲು ನೀವೇ ನನಗೆ ಹೇಳಿ ಕೊಟ್ಟಿರಿ ! " ಎಂದು ಮುಗುಳ್ನಗೆ ನಕ್ಕರು.

**ನೀವೇ ಹೇಳಿಕೊಟ್ಟಿರಿ!**

೧೯೨೪ರಲ್ಲಿ ಬೆಳಗಾಂವಿಯಲ್ಲಿ ಅಖಿಲಭಾರತದ ರಾಷ್ಟ್ರಮಹಾಸಭೆ. ರಾಷ್ಟ್ರಮಹಾಸಭೆಯು ದೊಡ್ಡದಾಗಿ ನಡೆಯುತ್ತಿದ್ದರೆ ತದಂಗವಾದ ಉಪಸಭೆಗಳಲ್ಲದೆ ಮರಿಸಭೆಗಳು ಸಣ್ಣಪುಟ್ಟಚಿಕ್ಕ ಸಭೆಗಳೂ ಸಮ್ಮೇಳನ ಗಳೂ ಎಷ್ಟೋ ಯಾರಿಗೆ ನೆನಪು? ಅಧ್ಯಕ್ಷಸ್ಥಾನದಲ್ಲಿದ್ದ ಬಾಪುಜಿ ಅಂತಹ ಸಮ್ಮೇಳನಗಳಲ್ಲೊಂದನ್ನಾದರೂ ಬಿಡದೆ ಪ್ರತಿಯೊಂದಕ್ಕೂ ಸ್ವಲ್ಪ ಕಾಲವನ್ನೊದಗಿಸಿ ತಮ್ಮ ಸಹಾನುಭೂತಿಯನ್ನು ತೋರ್ಪಡಿ ಸುವರು. ಪ್ರತಿಸಭೆಯ ಸಂಚಾಲಕರೂ ಗಾಂಧೀಜಿ ಯವರನ್ನು ಬರಮಾಡಿಕೊಂಡು ಐದು ನಿಮಿಷವಾಗಲಿ ಹತ್ತು ನಿಮಿಷವಾಗಲಿ ಬಂದುದೇ ಮಹಾಭಾಗ್ಯವೆಂದು ಭಾವಿಸುತ್ತಿದ್ದ ಸಮಯ. ಬೆಳಿಗ್ಗೆ ೪ ಗಂಟೆಯ ಬ್ರಾಹ್ಮೀ ಮುಹೂರ್ತದ ಪ್ರಾರ್ಥನೆಯಿಂದ ಮೊದಲಾದರೆ ಅಧ್ಯಕ್ಷರಿಗೆ ರಾತ್ರಿ ೧೧–೧೨ ಗಂಟೆ ವರೆಗೂ ಒಂದು ನಿಮಿಷವಾದರೂ ತೆರಪಿಲ್ಲದಂತೆ ಕಾರ್ಯಕ್ರಮವೇರ್ಪಟ್ಟಿತ್ತು.

**ಸಮ್ಮೇಳನದ ಸಂತೆ**

ಆ ಸಮ್ಮೇಳನಗಳ ಸಂತೆಯಲ್ಲಿ ರಾಷ್ಟ್ರೀಯ ಶಾಲೆಗಳ ಉಪಾಧ್ಯಾಯರದೂ ಒಂದು. ಅದಕ್ಕೆ ಗಾಂಧೀಜಿ ವಿನಾ ಬೇರಾರೂ ಅಧ್ಯಕ್ಷರಾಗಬಾರದೆನಿಸಿತ್ತು. ಗಾಂಧೀಜಿಯೂ ಒಪ್ಪಿದ್ದರು. ಒಂದು ರಾತ್ರಿ ೯ ಗಂಟೆಗೆ ಸಮ್ಮೇಳನ ಪ್ರಾರಂಭವಾಯಿತು. ಆರಂಭಭಾಷಣಗಳಾದ ಬಳಿಕ ಅನೇಕ ನಿಶ್ಚಯಗಳ ಚರ್ಚೆಗಾರಂಭವಾಯಿತು. ನಿಶ್ಚಯಗಳನ್ನು ಸೂಚಿಸತಕ್ಕವರು, ಅನುಮೋದಿಸತಕ್ಕವರು, ವಿರೋಧಿಸತಕ್ಕವರು, ಪ್ರೋಷಿಸತಕ್ಕವರು, ತಿದ್ದುಪಡಿಯನ್ನೊಡ್ಡತಕ್ಕವರು, ಅದಕ್ಕೆ ತಥಾಸ್ತು ಎನ್ನತಕ್ಕವರು ಎಲ್ಲರೂ ಯಥಾವಿಧಿಯಾಗಿ ವ್ಯವಹರಿಸಿದರು. ರಾತ್ರಿ ಹತ್ತೂವರೆಯಾಯಿತು. ಪ್ರೇಕ್ಷಕರಿಗೆ ಆಕಳಿಕೆ; ಆದರೆ ಮಹಾತ್ಮಾಜಿಯಿರುವವರೆಗೂ ಎದ್ದು ಹೊರಡುವ ಇಷ್ಟವಿಲ್ಲ. ಸಭಿಕರಲ್ಲಿಯೇ ಅನೇಕರಿಗೆ ತೂಗು ಹಿಡಿಯುತ್ತಿತ್ತು. ಇಷ್ಟು ಜನರಲ್ಲಿ ಒಬ್ಬರಾದರೂ ಬಾಪುಜಿಯಂತೆ ದಿನವನ್ನು ಕಳೆದವರಲ್ಲ; ಒಬ್ಬರಿಗಾದರೂ ಬಾಪುಜಿಯ ದೇಹದೌರ್ಬಲ್ಯವಿಲ್ಲ. ಬಾಪುಜಿಯ ಕಾರ್ಯಕ್ರಮದಲ್ಲಿ ಆ ಸಮ್ಮೇಳನ ಮುಗಿದ ಬಳಿಕ ಚರಖಾ ತೆಗೆದು ಅರ್ಧ ಗಂಟೆ ಸೂತ ತರುವಾಯವೇ ವಿಶ್ರಾಂತಿಯಾಗಬೇಕು, ಮರುದಿನ ಯಥಾವಿಧಿ ಬ್ರಾಹ್ಮೀ ಮುಹೂರ್ತಕ್ಕೆ ಹಗಲಾಗಬೇಕು. ಅಷ್ಟು ಆಯಾಸದ ಸಮಯವಾಗಿದ್ದರೂ ಬಾಪುಜಿ ಅಧ್ಯಕ್ಷರ ಕೆಲಸವನ್ನು ನಿರ್ವಹಿಸುತ್ತಿದ್ದರು.

ಹನ್ನೊಂದು ಗಂಟೆಯ ವೇಳೆಯಾದಾಗ ಯಾವುದೋ ಒಂದು ನಿಶ್ಚಯದ ಚರ್ಚೆ ಮುಗಿದು ವೋಟುಗಳನ್ನೆಣಿಸುವ ಹದಕ್ಕೆ ಬಂದಿತ್ತು. ವೋಟುಗಳನ್ನು ಕೇಳುವ ಮೊದಲು ಅಧ್ಯಕ್ಷರು ನಿಶ್ಚಯವನ್ನು ಸಾವಧಾನವಾಗಿ ಓದಿಹೇಳಿ ವೋಟುಗಳನ್ನು ಕೊಡಬಹುದೆಂದರು. ತೂಗುತ್ತಿದ್ದ ಸಭಿಕರು ಎಚ್ಚೆತ್ತರು. ಅವರಲ್ಲೊಬ್ಬ ನಿರ್ಭಾಗ್ಯನು ಎಚ್ಚೆತ್ತ ಕೂಡಲೇ ಎದ್ದು “ಆ ನಿಶ್ಚಯವೇನೋ ಎಂತೋ ದಯವಿಟ್ಟು ಓದಬೇಕು” ಎಂದು ಬೇಡಿದನು. “ಈಗತಾನೇ ಓದಿದ್ದಾಯಿತಲ್ಲ!” ಎಂದರು ಬಾಪುಜಿ. “ನಾನು ಗಮನಿಸದಿದ್ದೆ, ಮಹಾತ್ಮಾಜಿ” ಎಂದನು ಆತ. ಎಂಥವರಿಗಾದರೂ ಸ್ಥೈರಣೆ ಮಾಯವಾಗುವ ಸಂದರ್ಭ; ಅನೇಕರಿಗೆ ಅವನ ತಲೆ ಬುರುಡೆಯನ್ನೊಡೆಯಬೇಕೆನ್ನಿಸಿತು. ಎಲ್ಲರಿಗೂ ಹೇಳಲಾರದಷ್ಟು

ಬೇಜಾರಾಯಿತು. ಆಗ ಅರೆಕ್ಷಣ ತಾಳಿಕೊಂಡು ಬಾಪುಜಿ ಮಧುರಗಂಭೀರವಾಗಿ "ಉಪಾಧ್ಯಾಯನಿಗೇ ಗಮನವಿಲ್ಲ" ಎಂದರು. ಸಭಿಕರೂ ಪ್ರೇಕ್ಷಕರೂ ಎಲ್ಲರೂ ಗಟ್ಟಿಯಾಗಿ ನಕ್ಕರು. ನಗುವಿನ ತರಂಗಗಳು ಚಪ್ಪರದ ಹೊರಗೂ ಬಿದ್ದು ಹೊರಗಿದ್ದವರಿಗೆ ಆಸೆ ಅಸೂಯೆಗಳನ್ನುಂಟುಮಾಡಿದವು. ಈ ಬಗೆಯಲ್ಲಿ ಎಲ್ಲರೂ ಎಚ್ಚೆತ್ತಮೇಲೆ ಗಾಂಧೀಜಿ ಆ ನಿಶ್ಚಯವನ್ನು ಪುನಃ ಓದಿಹೇಳಿ ವೋಟುಗಳ ನಿರ್ಧಾರವನ್ನು ಕೈಕೊಂಡರು.

ಗಮನಶೂನ್ಯ ಉಪಾಧ್ಯಾಯ

ಇತ್ತೀಚೆಗೆ ಗಾಂಧೀಜಿಯುವರು ಬೆಂಗಳೂರಿನಲ್ಲಿದ್ದಾಗ ಸಂಸ್ಥಾನದ ಹಿಂದೀ ಪ್ರಚಾರಕ ಸಂಸ್ಥೆಯವರು ಪ್ರಶಸ್ತಿದಾನ ಸಮಾರಂಭವನ್ನಿಟ್ಟುಕೊಂಡು ಆ ಸಭೆಗವರನ್ನೇ ಅಧ್ಯಕ್ಷರನ್ನಾಗಿ ಆರಿಸಿಕೊಂಡರು. ದಿನ ವಾರ ಮುಹೂರ್ತಗಳನ್ನು ಅನುಕೂಲವಾಗಿ ಗೊತ್ತುಪಡಿಸಿಕೊಂಡು ಗಾಂಧೀಜಿಯುವರಿಗೆ ಅವುಗಳನ್ನು ತಿಳಿಸಿ ಅವರನ್ನು ತಾವೇ ಕರೆಯಬೇಕೆಂದುಕೊಂಡರು. ಅವರನ್ನು ಕಾಣಲು ವೇಳೆಯನ್ನು ಮಹಾದೇವಭಾಯಿಯುವರ ಮೂಲಕ ಹೊಂದಿಸಿಕೊಂಡರು. ಆ ಕಾಲದಲ್ಲಿ ಗಾಂಧೀಜಿಯುವರಿಗೊಂದು ನಿಮಿಷವಾದರೂ ಪುರಸತ್ತೆಂಬುದಿರಲಿಲ್ಲ. ದೊಡ್ಡದೊಡ್ಡ ಕೆಲಸಗಳನ್ನು ಹೊತ್ತವರು ಕಾರ್ಯಾರ್ಥಿಗಳಾಗಿ ಬಂದಿದ್ದರೂ ಅವರ ವೇಳೆಗಾಗಿ ಕಾಯಬೇಕಾಗಿದ್ದಿತು. ಶ್ರೀ ಕನ್ಹಯ್ಯಲಾಲ ಮುನಷಿಯುವರು ಸಾಮಾನ್ಯರಲ್ಲವಲ್ಲ! ಅವರು ಭಾರತೀಯ ಸಾಹಿತ್ಯ ಪರಿಷತ್ತೆಂಬ ಸಂಸ್ಥೆಗೆ ಕಾರ್ಯದರ್ಶಿಗಳಾಗಿದ್ದವರು. ಗಾಂಧೀಜಿಯುವರೇ ಅದಕ್ಕೆ ಅಧ್ಯಕ್ಷರು. ಆ ಸಂಸ್ಥೆಯ ಕೆಲಸದ ಸಂಬಂಧವಾಗಿ ಗಾಂಧೀಜಿಯುವರನ್ನು ಕಾಣಲು ಬೆಂಗಳೂರಿಗೆ ಬಂದ ಮುನಷಿಯುವರು ಅವರಿಂದ ಹತ್ತು ನಿಮಿಷಗಳ ಸಮಯವನ್ನು ಪಡೆಯಲು ಮೂರುದಿನಗಳ ಕಾಲವನ್ನು ತಳ್ಳುತ್ತ ಸಮಯವನ್ನು ಹೊಂಚಬೇಕಾಗಿತ್ತು. ಗಾಂಧೀಜಿಯುವರನ್ನು ಕಾಣಲಾಸೆಪಟ್ಟವರ ಬಾಯಲ್ಲಿ "ಮಹಾಗಜಾಃ ಪಲಾಯನ್ತೇ ಮಶಕಾನಾಂತು ಕಾ ಗತಿಃ" ಎಂದಾಡಿಕೊಳ್ಳಬೇಕಾಗಿತ್ತು. ಅಂತಹ ಕಾರ್ಯಾವಸರದ ಕಾಲದಲ್ಲಿ ತಮ್ಮ ಕೆಲಸಗಳಲ್ಲಿ ಪ್ರತಿಯೊಂದನ್ನೂ ನಿರ್ದಿಷ್ಟಾವಧಿ

ನಿಮಿಷಗಳ ತಸ್ಕರ

ಗಿಂತ ಬೇಗನೆ ಮುಗಿಸಿಕೊಂಡು ಒಂದೆರಡು ನಿಮಿಷಗಳನ್ನು ಕದ್ದು ಕೊಂಡು ಮುಂದಿನ ಕೆಲಸಕ್ಕೆ ತೊಡಗುವ ಚರ್ಯೆಯನ್ನು ಗಾಂಧೀಜಿ ಅವಲಂಬಿಸಿದ್ದರು.

ಹಿಂದೀ ಪ್ರಚಾರ ಸಂಸ್ಥೆಯ ಮಂತ್ರಿಸಚಿವಕಾರ್ಯದರ್ಶಿಗಳೆಲ್ಲರೂ ಗಾಂಧೀಜಿಯ ಶಿಷ್ಯವರ್ಗದಲ್ಲಿ ಎಣಿಕೆಯಾಗತಕ್ಕವರು ತಾನೇ? ವೇಳೆಗೆ ಮೊದಲು ಸಭೆಯ ಸಂಚಾಲಕರೂ ಪ್ರತಿನಿಧಿಗಳೂ ಗಾಂಧೀಜಿಯ ಕೊಟಡಿಯೊಳಕ್ಕೆ ಹೊರಟು ಸಮೀಪದಲ್ಲಿ ಕುಳಿತರು. ನಿರ್ದಿಷ್ಟ ವೇಳೆಗೆ ಸರಿಯಾಗಿ ಗಾಂಧೀಜಿಯವರು ಅವರ ಕಡೆ ಮುಖಮಾಡಿ ಮಾತನ್ನಾರಂಭಿಸಿದರು.

"ನಿಮ್ಮ ಸಮಾಚಾರವೇನು? ಏನು ಬೇಕಾಗಿತ್ತು ನಿಮಗೆ"

"ಪದವೀದಾನಸಮಾರಂಭವನ್ನು ಗೊತ್ತುಮಾಡಿಟ್ಟುಕೊಂಡಿದ್ದೇವೆ. ನೀವು ಅಧ್ಯಕ್ಷರಾಗಿ ಪ್ರಮಾಣಪತ್ರಿಕೆಗಳನ್ನು ಕೊಡಬೇಕು"

"ಒಳ್ಳೇದು. ಎಂದು?"

"ಶುಕ್ರವಾರ ಸಂಜೆ ೫ ಗಂಟೆಗೆ ಟೌನ್‌ಹಾಲಿನಲ್ಲಿ"

"ಶುಕ್ರವಾರ ಸಂಜೆ ೫ ಗಂಟೆಗೆ ನಾನಲ್ಲಿ ಬಂದರಾಗುವುದೊ? ಸಭೆಯೆಷ್ಟು ಹೊತ್ತು ಹಿಡಿದೀತು?"

"ಆಗುವುದು. ಸಭೆ ಸುಮಾರು ೧|| ಗಂಟೆಯಾಗಬಹುದು"

"ಒಳ್ಳೇದು. ಸಂಜೆಯಾದ್ದರಿಂದ ಹೋಗಿಬರುತ್ತ ನಡಿಗೆ ತೀರಿಸಿಕೊಂಡು ಬಂದಕೂಡಲೇ ಪ್ರಾರ್ಥನೆಯನ್ನು ನೆರವೇರಿಸಿಕೊಳ್ಳಬಹುದು. ವೇಳೆಗೆ ಸರಿಯಾಗಿ ನಾನು ಬರುತ್ತೇನೆ. ಮತ್ತೇನಿದೆ?

"ಇನ್ನೇನೂ ಇಲ್ಲ."

"ಸರಿ ಹಾಗಾದರೆ. ಇನ್ನು ಕಂಬಿ ಕಿತ್ತುಬಿಡಿ"

ಇಷ್ಟುಮಾತಿಗೆ ಗೊತ್ತಾಗಿದ್ದಂತೆ ಐದುನಿಮಿಷಗಳು ಹಿಡಿಯಲಿಲ್ಲ; ಮೂರುನಿಮಿಷಗಳಲ್ಲಿಯೇ ಮುಗಿಯಿತು. ಇನ್ನುಳಿದ ಎರಡುನಿಮಿಷ ಗಳನ್ನು ಜಿಪುಣನು ಬಿಡಿಗಾಸುಗಳನ್ನೆಣಿಸಿ ಗಂಟು ಕಟ್ಟಿ ಕೊಂಡಂತೆ ಕಟ್ಟಿಕೊಂಡುದಲ್ಲದೆ ಆ ಪ್ರತಿನಿಧಿಗಳನ್ನು ಹುಡುಗರಂತೆ ಕಂಡು ಮಾತನಾಡಿಸುತ್ತ "ಇನ್ನು ದೌಡಾಯಿಸಿ!"—"ಔರ್ ಭಾಗೋ, ಭಾಗೋ!" ಎನ್ನುತ್ತಾರೆ! ಕಾಲದಲ್ಲಿ ಎಷ್ಟು ಲೌಭ್ಯ! ಸಮೀಪವರ್ತಿಗಳಲ್ಲಿ ಎಂತಹ ಆತ್ಮೀಯತೆ!

ಭಾಗೋ!
ಭಾಗೋ!

ಬೆಂಗಳೂರಿನಂತಹ ಒಂದಾನೊಂದು ನಗರದಲ್ಲಿ ಗಾಂಧೀಜಿ ಯವರು ಹರಿಜನ ಸಂಘದ ಪರವಾಗಿ ಬರತಕ್ಕವರೆಂಬ ಸಮಾಚಾರ ತಿಳಿದ ಕೂಡಲೆ ನಗರಪ್ರಮುಖರು ಸ್ವಾಗತ ಮಂಡಲಿಯನ್ನು ಕಟ್ಟಿದರು. ಗಾಂಧೀಜಿಯವರು ಇರಬೇಕೆಂದಿದ್ದ ಎರಡು ಹಗಲುಗಳಲ್ಲಿ ಒಂದು ನಿಮಿಷವನ್ನಾದರೂ ಬಿಡದೆ ಅವರ ಕಾರ್ಯಕ್ರಮವನ್ನು ಗೊತ್ತುಮಾಡಿ ಸಿದ್ಧಪಡಿಸಿಕೊಂಡರು. ಬಂದಕ್ಷಣದಿಂದ ಗಾಂಧೀಜಿಯವರು ಸ್ವಾಗತ ಸಮಿತಿಯ ಅಧಿಕಾರಿಗಳ ಆಳಾಗಿ ಅವರು ನಿಶ್ಚಯಿಸಿದ್ದ ಕಾರ್ಯಕ್ರಮ ವನ್ನು ಚಾಚೂ ತಪ್ಪದಂತೆ ನಡೆಸಿಕೊಟ್ಟರು. ಎರಡನೆ ದಿನದ ರಾತ್ರಿ ಮುಂದಕ್ಕೆ ಪ್ರಯಾಣ. ಹೊರಡುವುದಕ್ಕೆ ಮೊದಲು ಮಂಡಲಿಯವರು ದರ್ಶನವನ್ನು ಅಪೇಕ್ಷಿಸಿದ್ದರು. ರೈಲಿಗೆ ಹೊರಡುವುದು ೯ ಗಂಟೆಗೆ; ಎಂಟೂವರೆಗೆ ತಮ್ಮ ಕೆಲಸವನ್ನು ಮುಗಿಸಿ ಗಾಂಧೀಜಿ "ಇನ್ನು ನಾನು ಸ್ವಾಗತಮಂಡಲಿಯವರನ್ನು ಕಾಣಲು ಸಿದ್ಧನಾಗಿದ್ದೇನೆ" ಎಂದರು. ಮಂಡಲಿಯ ಸಭಿಕರೆಲ್ಲರೂ ಹೃದಯಗಳನ್ನು ಬಾಯಲ್ಲಿ ಕಚ್ಚಿಕೊಂಡು ಎದುರಾದರು. ಒಂದು ತಿಂಗಳ ಹಿಂದಿನಿಂದ ನಾನಾರೀತಿಯಾಗಿ ಶ್ರಮ ವಹಿಸಿದ್ದವರವರು. ಖುದ್ದಾಗಿ ಗಾಂಧೀಜಿಯವರೊಂದಿಗೆ ಆಪ್ತರಂತೆ ಅರ್ಧಗಂಟೆ ಕಾಲಕಳೆಯುವ ಬಹುಮಾನಕ್ಕೆ ಅರ್ಹರಾಗಿದ್ದವರು. ಆದರೂ ತಮ್ಮ ಪುಣ್ಯಪ್ರಾಪ್ತಿಗಾಗಿ ಕೃತಜ್ಞತೆಯಿಂದ ತುಂಬಿದ್ದರು. ಅವರೊಂದಿಗೆ ಸ್ವಲ್ಪ ಹೊತ್ತು ಪ್ರೀತಿವಿಶ್ವಾಸಗಳಿಂದ ತುಂಬಿ ತುಳುಕಿದ ಮಾತುಗಳನ್ನಾಡುತ್ತ ಎಲ್ಲರನ್ನೂ ವಿಚಾರಿಸಿ ಹೊಸಬರ

ಪರಿಚಯವನ್ನು ಕೇಳಿ ಗಾಂಧೀಜಿಯವರು ಅವರನ್ನು ಆನಂದದಲ್ಲಿ ಮುಳುಗಿಸಿದರು.

ಆ ಸ್ವಾಗತಸಮಿತಿಗೆ ಅಧ್ಯಕ್ಷರೆನಿಸಿದವರೊಬ್ಬರು ವರ್ತಕಪ್ರಮುಖರು. ಭಾರಿ ಜವಾಬ್ದಾರಿಯನ್ನು ಕಟ್ಟಿಕೊಂಡು ನಿರ್ವಹಿಸಿದ ಬಳಿಕ ಆತನು ಗಾಂಧೀಜಿಯವರಲ್ಲಿ ಮಂಡಲಿಯ ಪರವಾಗಿ ಕ್ಷಮೆ ಬೇಡಬೇಕಾಗಿತ್ತು. ಎರಡು ದಿನಗಳೂ ಗಾಂಧೀಜಿಯವರ ದೇಹದಾರ್ಢ್ಯವಿಾರಿದ ಶ್ರಮವನ್ನು ತಮ್ಮ ಕಾರ್ಯಕ್ರಮದಲ್ಲಿ ಕೊಟ್ಟಿದ್ದರು. ಅಧ್ಯಕ್ಷರಾಗಿ ಮಾತನಾಡುವ ಅಧಿಕಾರಕರ್ತವ್ಯಗಳನ್ನು ವಹಿಸಿ ಆ ವರ್ತಕಮಹಾಶಯರು ತಾವಾಡಬೇಕಾಗಿದ್ದ ವಾಕ್ಯಗಳಿಗಾಗಿ ದಿನವೆಲ್ಲ ಕಷ್ಟಪಟ್ಟು ಯೋಚಿಸಿ ಭಾಷಣವನ್ನು ತಯಾರಿಸಿಕೊಂಡಿದ್ದು ಸಮಯಸನ್ನಿಹಿತವಾಗಲು ಹಾಗೂಹೀಗೂ ತಡವರಿಸಿ ನಿಂತುಕೊಂಡು ಗಂಟಲಧ್ವನಿಯನ್ನು ಅಳುಕಿನಿಂದ ಸರಿಪಡಿಸಿಕೊಂಡು ಆರಂಭಿಸಿದರು

ಅಂಶಪುರುಷ!

"ಮಹಾತ್ಮಾಜಿ, ಸ್ವಾಗತ ಮಂಡಲಿಯವರೆಲ್ಲರ ಪರವಾಗಿ ನಾನು ತಮ್ಮ ಕ್ಷಮೆ ಬೇಡತಕ್ಕವನಾಗಿದೇನೆ. ಎರಡು ದಿನದ ಕಾರ್ಯಕ್ರಮವನ್ನು ಹೊಂದಿಸುವುದರಲ್ಲಿ ತಮ್ಮ ಶರೀರದ ನೆಮ್ಮದಿಗೆ ಕುಂದುಂಟಾಗದಂತೆ ನೆರವೇರಿಸಲು ಎಷ್ಟು ಪ್ರಯತ್ನಪಟ್ಟರೂ ನಮಗೆ ಸಾಧ್ಯವಾಗದೆ ಹೋಯಿತು. ರಾತ್ರಿಯೆಲ್ಲ ಪ್ರಯಾಣದ ಪ್ರಯಾಸದಲ್ಲಿದ್ದು ಪ್ರತಿಯೂರಿನಲ್ಲಿಯೂ ಇಂತಹ ಕಾರ್ಯಕ್ರಮದ ಬಲೆಗೆ ಸಿಕ್ಕಿಬೀಳತಕ್ಕವರೆಂಬುದನ್ನು ನಾವು ಮರೆಯದಿದ್ದರೂ ನಮ್ಮ ಜಾಗರೂಕತೆಯು ಸಾಲದಾಯಿತು. ಅತಿ ಕಷ್ಟಸಾಧ್ಯವಾದ ಕಾರ್ಯಕ್ರಮವನ್ನೊದಗಿಸಿದುದು ನಮ್ಮ ಅಪರಾಧವಲ್ಲದೆ ಬೇರೆಯಲ್ಲ. ಒಬ್ಬಾನೊಬ್ಬರು ಹೇಳಿದಂತೆ ಅದು ಪ್ರಾಣವನ್ನು ಹಿಂಡುವ ಕಾರ್ಯಕ್ರಮವೇ ಆಗಿತ್ತು. ಇನ್ನೊಬ್ಬರಾಗಿದ್ದರೆ ಪ್ರಾಣಹೋಗಿಯೇ ಬಿಡುತ್ತಿತ್ತೋ ಏನೋ! ಆದರೆ ತಾವು ಇತರರಂತೆ ಮನುಷ್ಯಮಾತ್ರರಲ್ಲ; ಅಂಶಪುರುಷರು........"

ಮುಖಸ್ತುತಿ ಮಾಡುವ ಉದ್ದೇಶವಿಲ್ಲದಿದ್ದರೂ ಅದರ ತಲೆಯೆತ್ತಿದಂತೆ ತೋರಿದ ಕ್ಷಣವೇ ಗಾಂಧೀಜಿ ನಗುತ್ತ

> “ಸೈ! ಆದ್ದರಿಂದ ಅಂಶಪುರುಷನ ಪ್ರಾಣಹಿಂಡಲು ನೀವು ಸನ್ನದ್ಧರಾದಿರೋ?” ಎಂದರು.

ಈ ಚುರುಕು ಮಾತಿನಿಂದ ಅಧ್ಯಕ್ಷರ ಭಾಷಣಕ್ಕೆ ಪೂರ್ಣವಿರಾಮವೇ ಬಿತ್ತು. ಆದರೆ ಚುರುಕಾದರೂ ಸೋಜಿಗವಾದುದರಿಂದ ಎಲ್ಲರೂ ನಕ್ಕರು. ಬೇರೆ ಮಾತುಗಳು ಹಲಕೆಲವಾದುವು. ಹೊರಡುವ ವೇಳೆ

**ನಿಯಮಭಂಗ**

ಹತ್ತಿರವಾಯಿತು. ಆ ವೇಳೆಗೆ ಅಧ್ಯಕ್ಷರು ಅತ್ಯಾಸೆಯಿಂದ ಕಾದಿದ್ದರು. ಅವರಿಗೆ ಗಾಂಧೀಜಿಯ ಪಾದಗಳನ್ನು ಮುಟ್ಟಿ ಸಾಷ್ಟಾಂಗ ಸಮರ್ಪಿಸುವ ಆಸೆ. ಅಧ್ಯಕ್ಷರಾಗಿ ಕಷ್ಟಪಟ್ಟಿದ್ದುದರಿಂದ ಅಷ್ಟುಮಾತ್ರದ ಹೆಚ್ಚುಗಾರಿಕೆಯ ಅಧಿಕಾರ ದಕ್ಕಿಸಿಕೊಳ್ಳಲು ಸಮಯೋಚಿತವಾದ ಮಾತನ್ನೂ ಯೋಚಿಸಿಟ್ಟುಕೊಂಡಿದ್ದರು. ಎದ್ದು ಹೊರಡುವ ವೇಳೆಯೊದಗಿದಾಗ ಅಧ್ಯಕ್ಷರು

> “ಮಹಾತ್ಮಾಜಿ, ಈ ಎರಡು ದಿನಗಳಿಂದಲೂ ತಮ್ಮ ಬಳಿ ಬಂದು ನಮಸ್ಕಾರಮಾಡುವುದಕ್ಕೂ ತಮ್ಮ ಪಾದಗಳನ್ನು ಮುಟ್ಟುವುದಕ್ಕೂ ಇತರರನ್ನು ನಿರ್ದಾಕ್ಷಿಣ್ಯವಾಗಿ ಅಡ್ಡಿಪಡಿಸುತ್ತ ಸರ್ಪಕಾವಲನ್ನಿಟ್ಟಿದ್ದೆ. ಆದರೆ ಈಗ ನಾನೇ ನಿಮ್ಮ ಪಾದಗಳನ್ನು ಮುಟ್ಟಿ ಪ್ರಣಾಮ ಸಲ್ಲಿಸುವ ಆಸೆಯನ್ನು ತೀರಿಸಿಕೊಳ್ಳುತ್ತೇನೆ”

ಎನ್ನುತ್ತ ನೆಲದಮೇಲೆ ದೀರ್ಘದಂಡಪ್ರಣಾಮವನ್ನು ಮಾಡಿದರು. ಆಗ ಸುಮ್ಮನೆ ಮುಗುಳ್ನಗೆಯಿಂದ ಗಾಂಧೀಜಿ

> “ನಿಮ್ಮ ನಿಯಮಗಳನ್ನು ನೀವೇ ಭಂಗಪಡಿಸುವುದರಲ್ಲಿ ಪ್ರವೀಣರೆಂದು ನನಗೆ ಮೊದಲೇ ತಿಳಿದಿತ್ತು”

ಎಂದರು. ಹಾಸ್ಯವೂ ಆಯಿತು; ಛೀಕಾರವೂ ಆಯಿತು. ಎಂತಹ ಮಾತುಗಳನ್ನಾಡಿದರೂ ಗಾಂಧೀಜಿಯನ್ನು ಮರುಳುಗೊಳಿಸಲಾಗುವುದಿಲ್ಲ. ಶಿಷ್ಯವರ್ಗದವರಲ್ಲಿ ಸೇರಿದವರು ಸರಿಯಾದ ದಾರಿಯಲ್ಲಿ ಹೆಜ್ಜೆಯಿಡಲು ಮನಸ್ಸು ಗಟ್ಟಿಮಾಡಿಕೊಂಡ ತರುವಾಯ ಯಾವಾಗ

ಲಾದರೂ ದೌರ್ಬಲ್ಯಕ್ಕೆಡೆಗೊಟ್ಟರೆ ಅದಕ್ಕೆ ತಕ್ಕ ಎಚ್ಚರಿಕೆಯ ಮಾತು ಚುರುಕಾಗಿ ಹಾಸ್ಯಪ್ರಕಾಶದಿಂದ ಮಿಂಚುವುದು.

ಈ ಬಗೆಯಾಗಿ ಮಿಂಚುವ ಚುರುಕು ಆತ್ಮೀಯವರ್ಗದವರೆದುರಿನಲ್ಲಿ ಸಹಜ. ಸಲಿಗೆಯಿದ್ದೆಡೆಯಲ್ಲಿಯೇ ಹೊರತು ಅಪರಿಚಿತರಲ್ಲಾಗಲಿ ನೂತನ ಪರಿಚಿತರಲ್ಲಾಗಲಿ ತೋರತಕ್ಕದ್ದಲ್ಲ. ಸಲಿಗೆಯಿಂದಲೇ ಆ ಚುರುಕಿಗೆ ಅಧಿಕಾರಪ್ರಾಪ್ತಿ. ಸಾಮಾನ್ಯವಾಗಿ ಸಲಿಗೆಯೆಂದರೆ ಎಷ್ಟೋ ಅವಕಾಶ! ಪ್ರಾಣಸ್ನೇಹಿತರು ಪರಸ್ಪರವಾಗಿ ಬಯ್ದಾಡಿಕೊಳ್ಳುವುದು ಸಲಿಗೆಯಿಂದ.

ಸಲಿಗೆ

ಪೀಠಿಕಾಪ್ರಸಂಗಗಳಿಲ್ಲದೆ ನೇರವಾಗಿ ವಿಷಯವನ್ನೆತ್ತಿಯಾಡಿಕೊಳ್ಳುವುದಕ್ಕೆ ಸಲಿಗೆಯೇ ಅವಕಾಶವನ್ನು ನೀಡುವುದು. ಆಡಿದ ಮಾತಿನಲ್ಲೊಂದು ವೇಳೆ ಹೆಚ್ಚುಕಡಿಮೆಯಾದರೂ ಪರವಾಇಲ್ಲವೆಂಬ ಧೈರ್ಯ ಹುಟ್ಟುವುದೂ ಸಲಿಗೆಯ ಬಲದಿಂದ. ಸಲಿಗೆಯುಳ್ಳವರಾಡಿಕೊಳ್ಳುವ ಮಾತನ್ನು ಇತರರರ್ಥಮಾಡಿಕೊಳ್ಳಲು ವ್ಯಾಖ್ಯಾನ ಟೀಕೆಗಳು ಬೇಕಾಗುವುದು ಆ ಕಾರಣದಿಂದಲೇ. ಆಪ್ತತೆ ಬೆಳೆಯಲು ಸಲಿಗೆಯು ಅಸ್ತಿಭಾರದಂತೆ; ಆಪ್ತತೆಗೆ ಸಲಿಗೆಯೆಂಬುದು ಅವಶ್ಯ ಲಕ್ಷಣ. ಆದರೆ ಹಿತ್ತಿಲ ಗಿಡ ಹೇಗೆ ಮದ್ದಾಗದೆ ಹೋಗಬಹುದೋ ಹಾಗೆ ಸಲಿಗೆಯಿಂದ ಅಲಕ್ಷ್ಯವೂ ಕೆಲ ವೇಳೆಗಳಲ್ಲಿ ಹುಟ್ಟಬಹುದು. ಅಲಕ್ಷ್ಯ ತಿರಸ್ಕಾರಗಳಿಗೆ ಅವಕಾಶ ಕೊಡದಂತೆ ಸಲಿಗೆಯನ್ನು ಏಕರೀತಿಯಾಗಿ ಕಾಪಾಡಿಕೊಳ್ಳುವುದಲ್ಲದೆ ತಾರತಮ್ಯಜ್ಞಾನವನ್ನುಳಿಸಿಕೊಂಡಿರುವುದು ನಡತೆಯಲ್ಲಿ ದೊಡ್ಡ ಅಂಶ. ಆದ್ದರಿಂದಲೇ ಅಲಕ್ಷ್ಯ ತೋರಲು ಸಲಿಗೆಯನ್ನು ತಳಹದಿಯಾಗಿ ಉಪಯೋಗಿಸಿಕೊಂಡವರನ್ನು ಸಣ್ಣ ಮನಸ್ಸುಳ್ಳವರೆಂದಾಡಿಕೊಳ್ಳುತ್ತೇವೆ. ದೊಡ್ಡ ಮನಸ್ಸುಳ್ಳವರ ಬಳಿ ಇಂತಹ ದೋಷವು ಸುಳಿದಾಡುವುದಿಲ್ಲ.

ಗಾಂಧೀಜಿಯವರಲ್ಲಿ ಸಲಿಗೆಯುಳ್ಳವರಾರೆಂದು ಹೇಳುವುದು ಸುಲಭವಲ್ಲ. ಅವರ ಪ್ರೀತಿಯನ್ನು ಸಂಪಾದಿಸಿದಂತೆಲ್ಲ ಸಲಿಗೆಯೇನೋ ಹೆಚ್ಚಬಹುದಾದರೂ ಸಲಿಗೆಗಿಂತ ಹೆಚ್ಚಾಗಿ ಅಂತಃಕರಣಪರೀಕ್ಷೆಯು ಚುರುಕನ್ನು ತಾಳುವುದು. "ಗಾಂಧೀಜಿಗೂ ನಮಗೂ ಎಷ್ಟು ಅಂತರ!" ವೆಂಬ ಪ್ರಜ್ಞೆಯು ಸಮೀಪವರ್ತಿಗಳಿಗಿದ್ದಷ್ಟು ಇತರರಿಗಿರುವುದಿಲ್ಲ. ಈ

ರೀತಿಯಲ್ಲಿ ಸಮೀಪಿಸಿದಷ್ಟೂ ದೂರವಾಗುವುದು; ಸಲಿಗೆ ಹೆಚ್ಚಿದಷ್ಟೂ ಭಯಭಕ್ತಿಗಳು ಹೆಚ್ಚುವುವು. ಗಾಂಧೀಜಿಯವರೆದುರಿಗೆ ಸರಿಸಮಾನರಾಗಿ ವರ್ತಿಸುವ ಭಾರತೀಯರನ್ನು ತೋರಿಸುವುದು ಅಸಾಧ್ಯ. ಆದಾಗ್ಯೂ ಸಲಿಗೆಯಿಂದ ಓಡಾಡುವವರಿಗೆ ಕೊರತೆಯಿಲ್ಲ; ಆದ್ದರಿಂದ ಸಲಿಗೆಯ ಹಾಸ್ಯದ ಸಂದರ್ಭಗಳಿಗೂ ಕಡಿಮೆಯಿಲ್ಲ.

**ನನ್ನ ಅರಮನೆ**

ಪಂಡಿತ ಮೋತೀಲಾಲ ನೆಹರು ಎಂತಹ ವ್ಯಕ್ತಿಯೆಂಬುದನ್ನು ಈಗಿನ ತರುಣರು ಪ್ರಾಯಶಃ ಅರಿಯರು. ಅವರ ದಕ್ಷತೆಗೆ ತಕ್ಕ ದರ್ಪವು ಅವರಲ್ಲಿತ್ತು. ಬ್ರಿಟಿಷ್ ಪ್ರಾಂತಗಳ ಲಾರ್ಡ್ ಗವರ್ನರುಗಳನ್ನು ಬಾ ಹೋಗೆಂದು ಧಾರಾಳವಾಗಿ ಮಾತನಾಡಿಸುವ ರೀತಿ ಅವರಿಗೆ ಸಹಜವಾಗಿತ್ತು. ಭೋಗಭಾಗ್ಯಗಳಲ್ಲಿ ಪ್ರೌಢಿಮೆಯನ್ನನುಭವಿಸಿದ ಮೋತಿಲಾಲರು ಮಹಾತ್ಮಾಜಿಯ ದಂಡನಾಯಕರಾಗಿಹೋದರು. ಶುಭ್ರಧವಳ ಖಾದಿಯನ್ನುಟ್ಟತರುವಾಯ ಮೋತಿಲಾಲರ ಗಂಭೀರವಾದ ರೀತಿಯು ದ್ವಿಗುಣವಾಗಿ ಶೋಭಿಸಿತು. ಮಹಾತ್ಮಾಜಿ ಮೋತಿಲಾಲರ ಸ್ನೇಹವೃತ್ತಾಂತ ವಿವರಗಳನ್ನು ತಿಳಿದವರು ಬಿಚ್ಚಿ ಬಿತ್ತರಿಸುವುದಾದರೆ ಇಡೀ ಲೋಕವೇ ಆಸೆಯಿಂದ ಕೇಳುವುದು. ಮೋತಿಲಾಲರ ಮನೆಯಲ್ಲಿ ಗಾಂಧೀಜಿಯವರು ಅತಿಥಿಗಳಾದಾಗ ಹೇಗಿದ್ದಿರಬಹುದೋ ಗಾಂಧೀಜಿಯವರ ಆಶ್ರಮದ ಗುಡಿಸಲುಗಳಲ್ಲಿ ಮೋತಿಲಾಲರು ಅತಿಥಿಗಳಾಗಿದ್ದಾಗ ಹೇಗಿದ್ದಿರಬಹುದೋ ಊಹಿಸಿಕೊಳ್ಳಬೇಕು. ಅಂತಹ ಮೋತಿಲಾಲರು ೧೯೨೭ರಲ್ಲಿ ಗಾಂಧೀಜಿಯವರನ್ನು ಕಾಣಲು ಬೆಂಗಳೂರಿನ ಕುಮಾರಪಾರ್ಕಿಗೆ ಬಂದರು. ಅವರನ್ನೆದುರುಗೊಳ್ಳಲು ಗಾಂಧೀಜಿಯವರು ಮಹಡಿಯಿಂದಿಳಿದು ಹಜಾರದಲ್ಲಿ ನಿಂತಿದ್ದು ಅವರೆದುರಾಗಿ ಕಂಡಕೂಡಲೆ ತಮ್ಮೆರಡು ಕೈಗಳನ್ನೂ ಒಡ್ಡಿ "ಬನ್ನಿ, ಬನ್ನಿ, ನನ್ನರಮನೆಗೆ" ಎಂದು ನಕ್ಕರು. ಮನೆ ಬಾಗಿಲೆಂಬುದಿಲ್ಲದೆ ದೇಶದಲ್ಲೆಲ್ಲ ಅಲೆದಾಡುತ್ತ ಮುರುಕು ಜೋಪಡಿಗಳಲ್ಲಿಯೇ ಹಟದಿಂದ ಕಾಲಹಾಕುವಂತಹ ಪ್ರಾಣಿ ಮೋತಿಲಾಲರೆದುರಿನಲ್ಲಿ "ನನ್ನ ಅರಮನೆ"ಯೆಂದು ಹೇಳಿಕೊಳ್ಳುವ ಚಪಲತೆಯ ಸೌಂದರ್ಯವನ್ನು ನಮಗಿಂತಲೂ ಅವರಿಬ್ಬರೇ ಹೆಚ್ಚಾಗಿ ಅನುಭವಿಸಿದರು.

ಹಣ್ಣು ಹಂಪಲೆಂದರೆ ಶ್ರೀ ರಾಜಾಜಿಯವರಿಗೆ ಇಷ್ಟಮಾತ್ರವಲ್ಲ, ಚಪಲ. ಈ ಸಂಗತಿಯನ್ನು ಅವರ ಪರಿವಾರದವರು ಬಲ್ಲರು. ೧೯೪೭ರಲ್ಲಿ ರಾಜಾಜಿಯವರು ನಂದಿಯಲ್ಲಿ ಗಾಂಧೀಜಿಯ ಜತೆಯಲ್ಲಿದ್ದರಷ್ಟೆ. ಹಾಗಿದ್ದಾಗ ಒಂದು ದಿನ ಕೆಲವರು ಮುಗ್ಧ ಜನರು ಸೊಗಸಾದ ಮಾವಿನಹಣ್ಣುಗಳನ್ನು ಒಂದು ದೊಡ್ಡ ತಟ್ಟೆಯಲ್ಲಿ ತುಂಬಿಕೊಂಡು ಮಹಾತ್ಮಾಜಿಯ ದರ್ಶನಕ್ಕಾಗಿ ಬಂದರು. ಇಂತಹ ಕಾಣಿಕೆಯನ್ನಾಶಿಸುವುದಾಗಲಿ ಸ್ವೀಕರಿಸುವುದಾಗಲಿ ಬಾಪುಜಿಯ ಚರ್ಯೆಯಲ್ಲಿಲ್ಲ. ತಂದವರಿಗೇ ಹಿಂತಿರುಗಿ ಕೊಡಿಸುವುದು ಅಥವಾ ದೀನದರಿದ್ರ ಹುಡುಗರಿಗೆ ಕೊಡಿಸುವುದು, ಇನ್ನುಮೇಲೆ ಅನುಚಿತವಾದ ವೆಚ್ಚಮಾಡದಿರೆನ್ನುವುದು ಎಷ್ಟೋ ಅಷ್ಟೆ. ಆ ಹೊತ್ತು ಹಣ್ಣು ತಂದಿದ್ದವರನ್ನು ಬಾಪುಜಿ ಕಂಡು ಮಾತನಾಡಿಸಿದ ಬಳಿಕ "ಹಣ್ಣನ್ನು ಹಿಂತಿರುಗಿ ತೆಗೆದುಕೊಂಡು ಹೋಗಿ. ನಿಮಗೆ ದೊರಕುವ ದೀನದರಿದ್ರರಿಗೆ ಕೊಡಿ. ಭಗವಂತನಿಗೆ ಅರ್ಪಣೆಯಾದಂತೆಯೇ ಆಗುವುದು" ಎಂದರು. ಬಂದಿದ್ದವರಿಗಂತೂ ಆಶಾಭಂಗವಾಯಿತು. ತಮ್ಮ ಅರ್ಥವನ್ನು ಮತ್ತೊಂದು ಬಾರಿ ಬಾಪುಜಿ ತಿಳಿಸಿದರು. ಅಲ್ಲಿಯೇ

ಹಣ್ಣಮೇಲೆ ಕಣ್ಣು

ಕುಳಿತಿದ್ದ ರಾಜಾಜಿ "ಅಯ್ಯೋ ಪಾಪ! ಹಾಗೆ ಹಿಂತಿರುಗಿ ಕಳುಹಿದರೆ ಅವರು ಮನಸ್ಸಿನಲ್ಲಿ ಬಹಳ ನೊಂದುಕೊಳ್ಳುವರು, ಬಾಪು" ಎಂದರು. ಬಾಪುಜಿ "ಅವರು ಮಾಡಿರುವ ಕೆಲಸ ಸರಿಯಲ್ಲ. ತಂದ ಹಣ್ಣನ್ನು ನಾವು ಸ್ವೀಕರಿಸುತ್ತಲಿದ್ದರೆ ಇಲ್ಲಿಗೆ ಬರುವವರೆಲ್ಲರೂ ರಾಶಿರಾಶಿ ಹಣ್ಣುಹಂಪಲನ್ನು ತಂದೊಡ್ಡುವರು. ಅದೇ ವೆಚ್ಚವನ್ನು ಅವರು ತಮ್ಮ ಕಣ್ಣೆದುರಿಗಿರುವ ಬಡಪಾಪಿಗಳಿಗಾಗಿ ಏತಕ್ಕೆ ಮಾಡಬಾರದು?" ಎಂದರು. "ನಿಜ. ಆದರೆ ಇವರು ಭಕ್ತಿಯಿಂದ ತಂದಿದ್ದಾರೆ. ಈ ಸಲ ತೆಗೆದಿಟ್ಟುಕೊಳ್ಳೋಣ" ಎಂದರು ರಾಜಾಜಿ. ಅದಕ್ಕೆ ಬಾಪುಜಿ "ಆಗಲಿ. ಆದರೆ ಪುನಃ ಹಣ್ಣುಹಂಪಲನ್ನು ಇನ್ನುಮೇಲೆ ಯಾರೂ ಹೀಗೆ ತಾರದಂತೆ ನೋಡಿಕೊಳ್ಳಿ" ಎಂದರು. ಬಂದಿದ್ದ ಭಕ್ತರು ಹಣ್ಣನ್ನು ತೆಗೆದಿಟ್ಟು ಹೊರಟರು. ಆಗ ಬಾಪುಜಿ ನಸುನಕ್ಕು "ಆ ಹಣ್ಣಿನಮೇಲೆ ನಿಮ್ಮ ಕಣ್ಣು ಬಿದ್ದಿದ್ದಂಶವನ್ನು ನಾನು ಗಮನಿಸಿದ್ದೆ" ಎಂದರು.

ಇಂತಹದೇ ಸಂದರ್ಭ ಬಾಪುಜಿಯುವರು ಸರ್ ಸುರೇಂದ್ರನಾಥ ಬಾನರ್ಜಿಗಳ ಮನೆಗೆ ಹೋಗಿದ್ದಾಗ ತೋರಿತ್ತು. ಬಾಪುಜಿಗೆ ಅವರು ಹಿರಿಯರು. ಬಂಗಾಳದಲ್ಲಿ ಸಂಚಾರಮಾಡುತ್ತಿದ್ದು ಅವರನ್ನು ಕಂಡು ನಮಸ್ಕರಿಸದಿರುವ ಔದಾಸೀನ್ಯ ಗಾಂಧೀಜಿಯುವರಲ್ಲಿ ಅಸಾಧ್ಯ. ಇಬ್ಬರು ಮೂವರನುಚರರೊಡನೆ ಗಾಂಧೀಜಿ ಕಲ್ಕತ್ತೆಯಿಂದ ಹೊರಟರು. ಸುರೇಂದ್ರನಾಥರ ಮನೆಯೆದುರಿನಲ್ಲಿ ವಾಹನವು ನಿಂತಿತು. ಎಲ್ಲರೂ ಇಳಿದರು. ಮನೆ ಬಾಗಲಿನಲ್ಲಿ ನಿರೀಕ್ಷೆಯಿಂದಿದ್ದ ಸುರೇಂದ್ರನಾಥರು ಅತ್ಯಾದರದಿಂದ ಗಾಂಧೀಜಿಯುವರನ್ನು ಕೈಹಿಡಿದು ಒಳಕ್ಕೆ ಕರೆದು ಕೊಂಡು ಹೊರಟರು. ಕುಶಲಪ್ರಶ್ನೆಗಳೂ ಮಾತುಕಥೆಗಳೂ ಆಗುತ್ತಿ

ಸುರೇಂದ್ರನಾಥರ ಮಿಠಾಯಿ

ದ್ದಂತೆಯೇ ಪರಮಾನಂದದಿಂದ ತುಂಬಿದ್ದ ಶತವೃದ್ಧ ಸುರೇಂದ್ರನಾಥರೆದ್ದು ಹಣ್ಣುಮಿಠಾಯಿ ಇಟ್ಟಿದ್ದ ತಟ್ಟೆಯನ್ನು ತಂದು “ ನಮ್ಮ ಮನೆಗೆ ಬಂದ ಅತಿಥಿಯ ಪೂಜೆಗೆಂದು ಮನೆಯುವರು ಮಾಡಿರುವ ಕೆಲಸ! ಆದರೆ ನೀನು ಸಂನ್ಯಾಸಿಗಿಂತ ಗೊಡ್ಡು; ಅವರ ಪ್ರಯತ್ನ ವ್ಯರ್ಥವಾದಂತೆಯೇ ಸರಿ!” ಎಂಬರ್ಥದ ಮಾತುಗಳನ್ನಾಡಿದರು. ಅದಕ್ಕೆ ಬಾಪು “ ವ್ಯರ್ಥ ವೇಕೆ? ನಾನು ಇವುಗಳನ್ನು ಮೆಲ್ಲದಿದ್ದರೇನು ನಷ್ಟ? ನನ್ನ ಜತೆಯಲ್ಲಿ ದ್ದಾರೆ, ಇಷ್ಟದಿಂದ ಸ್ವೀಕರಿಸುತ್ತಾರೆ” ಎನ್ನುತ್ತ ತಮ್ಮ ಹಿಂದೆ ಬಂದಿದ್ದ ಯುವಕರನ್ನು ಕರೆದು ಆ ತಿಂಡಿಯನ್ನು ಕೊಡಿಸಿದರು.

ಕವಿಸಾರ್ವಭೌಮರೆನಿಸಿದ ರವೀಂದ್ರನಾಥ ಠಾಕೂರರು ಸಾಬ ರ್ಮತಿಯ ಸತ್ಯಾಗ್ರಹಾಶ್ರಮಕ್ಕೆ ಬರುವ ಸಂದರ್ಭ. ರವೀಂದ್ರರೆದು ರಾಗುವರೆಂದರೆ ಭಾರತ ಸಂಸ್ಕೃತಿಯ ಸೌಭಾಗ್ಯಮೂರ್ತಿಯನ್ನು

ನಡತೆ ತಕ್ಕಹಾಗಿಲ್ಲ

ಕಂಡಂತೆಯೇ ಆಗುವುದು. ಅವರನ್ನೆದುರುಗೊಳ್ಳಲು ಗಾಂಧೀಜಿಯುವರು ತಾವೇ ರೈಲು ಸ್ಟೇಷನ್ನಿಗೆ ಹೊರ ಟರು. ಗಾಡಿಯಿಂದ ಅವರಿಳಿದಕೂಡಲೆ ಕಾಣಿಸಿ ಕೊಂಡು ಕುಶಲಪ್ರಶ್ನೆ ಮಾಡಿದರು. ಗಾಂಧೀಜಿ ಯುವರೇ ಸ್ವತಃ ಬಂದರೆಂದು ರವೀಂದ್ರರಿಗೆ ಪರಮಾನಂದವಾಯಿತು. ಗಾಂಧೀಜಿಯ ಪ್ರಸನ್ನವದನವನ್ನು ಕಂಡು ಸಂತೋಷಪಡದಿರಲು

ಯಾರಿಗೆ ಸಾಧ್ಯ? ಆಗ ರವೀಂದ್ರರು ದೂರಪ್ರಯಾಣವನ್ನು ಮಾಡಿ ಪ್ರಯಾಸಪಟ್ಟಿದ್ದರು; ಮುಖ ಬಾಡಿದಂತಿತ್ತು. ರವೀಂದ್ರರನ್ನು ಮಾತನಾಡಿಸುತ್ತ ಬಾಪುಜಿ "ನೀವು ನಮ್ಮೆಲ್ಲರ ನಿಧಿ. ನಿಮ್ಮ ಆರೋಗ್ಯವನ್ನು ಇನ್ನೂ ಎಚ್ಚರಿಕೆಯಿಂದ ಕಾಪಾಡಿಕೊಳ್ಳಬೇಕು" ಎನ್ನುವ ಮಾತುಗಳನ್ನಾಡಿದರು. ಅದಕ್ಕೆ ಪ್ರತಿಯಾಗಿ ರವೀಂದ್ರರು "ನೀವಾದರೆ ಭಾಗ್ಯಶಾಲಿಗಳು! ಅಮೇಯವಾದ ಕೆಲಸಕಾರ್ಯಗಳನ್ನು ಕಟ್ಟಿಕೊಂಡು ನಿರ್ವಹಿಸಿ ದಣಿಯುತ್ತೀರಿ; ಆ ದಣಿವು ಆರುವಂತೆ ಆಗಾಗ್ಗೆ ವಿಶ್ರಾಂತಿಗೆ ಅವಕಾಶವನ್ನು ಸರಕಾರದವರೇ ನಿಮಗೊದಗಿಸಿ ಕೊಡುತ್ತಾರೆ. ನಮಗಾ ಭಾಗ್ಯವಿಲ್ಲ" ಎಂದರು. ಬಾಪುಜಿ "ಆ ಭಾಗ್ಯವನ್ನು ದಕ್ಕಿಸಿಕೊಳ್ಳುವ ನಡತೆ ನಿಮ್ಮಲ್ಲಿದ್ದರಲ್ಲವೆ!" ಎಂದರು. ಸುತ್ತಮುತ್ತಲಿದ್ದವರೆಲ್ಲರೂ ನಕ್ಕರು; ಆಮೇಲೆ ಅಚ್ಚರಿಗೊಂಡರು.

ಮದರಾಸಿನಲ್ಲಿ ಗಾಂಧೀಜಿಯವರಿದ್ದ ಒಂದು ಸಮಯದಲ್ಲಿ ಹಿಂದೀ ಪ್ರಚಾರಸಂಬಂಧವಾದ ಸಭೆ ನಡೆಯಿತು. ನಗರಪ್ರಮುಖರೆಲ್ಲರೂ ಆ ಬಹಿರಂಗ ಸಭೆಗೆ ಬಂದಿದ್ದರು. ಅವರಲ್ಲಿ ಶ್ರೀ ಜಿ. ಎ. ನಟೇಶನ್ ಎಂಬ ಸುಪರಿಚಿತರೂ ಇದ್ದರು. ಮೂವತ್ತು ವರ್ಷಕಾಲದ ಪರಿಚಯ ನಟೇಶನ್ನರದು. ಗಾಂಧೀಜಿ ದಕ್ಷಿಣ ಆಫ್ರಿಕದಲ್ಲಿದ್ದಾಗಲೇ ಅವರನ್ನು ಮೆಚ್ಚಿ ಅವರ ಕೆಲಸಕ್ಕಾಗಿ ದ್ರವ್ಯಸಹಾಯವನ್ನೆತ್ತಿದ್ದರು. ಗಾಂಧೀಜಿ ಮದರಾಸಿಗೆ ಬಂದ ಮೊಟ್ಟಮೊದಲಬಾರಿ ನಟೇಶನ್ನರ ಮನೆಯ ಅತಿಥಿಗಳಾಗಿದ್ದರು. ದೀರ್ಘಕಾಲದ ಪರಿಚಯದಿಂದ ಸಲಿಗೆಯೆಂಬುದು ಭದ್ರವಾಗಿ ಸ್ಥಾಪಿತವಾಗಿದ್ದಸರಕು. ಆ ಸಭೆಯಲ್ಲಿ ಸಂದರ್ಭವಶಾತ್ ಗಾಂಧೀಜಿಯವರು "ಹಿಂದೀ ಮಾತನ್ನು ಇನ್ನೂ ಕಲಿಯದಿರುವವರು ಕೈಯೆತ್ತಬೇಕು" ಎಂದು ಕೇಳಿದರು. ಇತರರೊಂದಿಗೆ ನಟೇಶನ್ನರೂ ಕೈಯೆತ್ತಿದರು. ಅದನ್ನು ಕಂಡ ಕೂಡಲೆ ಆ ತುಂಬಿದ ಸಭೆಯಲ್ಲಿ ಗಾಂಧೀಜಿ "ಷೇಮ್!" ಎಂದು ಹುಡುಗರು ಕೂಗಿದಂತೆ ಕೂಗಿಬಿಟ್ಟು ನಕ್ಕರು. ತರುವಾಯ ತಮ್ಮ ಕೂಗಿನ ಅರ್ಥವನ್ನು ಮೃದುವಚನಗಳಿಂದ ವಿವರಿಸಿದರು.

ಷೇಮ್!

ಸತ್ಯಶೋಧನೆಯ ಗ್ರಂಥವನ್ನೋದಿರತಕ್ಕವರೆಲ್ಲರಿಗೂ ಮಂಜುಗಡ್ಡೆ ವೈದ್ಯನ ನೆನಪಿರಬೇಕು. ರೋಗವನ್ನು ಗುಣಪಡಿಸುವುದರಲ್ಲಿಯೂ

ರೋಗಬಾರದಂತೆ ಋತುಚರ್ಯೆಯನ್ನು ವಿಧಿಸುವುದರಲ್ಲಿಯೂ ನಾನಾ ನೀತಿರೀತಿಗಳು ಹೊಸವೂ ಹಳವೂ ಚಿತ್ರವೂ ವಿಚಿತ್ರವೂ ಐಲೂ ಫೈಲೂ ಉಂಟಷ್ಟೆ. ಅಂತಹ ಪರೀಕ್ಷಕರೂ ಶೋಧಕರೂ ಗಾಂಧೀಜಿಯವರ ಆದರಕುತೂಹಲಗಳನ್ನು ಸಂಪಾದಿಸಿಕೊಳ್ಳುವರು. ಅಂತಹವರಲ್ಲಿ ಒಬ್ಬಾತನು ಆಂಧ್ರ ಪ್ರಾಂತದಲ್ಲಿ ಗಾಂಧೀಜಿಯಿದ್ದಾಗ ಅವರಬಳಿ ಸೇರಿದನು. ಆಹಾರ ಪದಾರ್ಥಕ್ಕೆ ಬೆಂಕಿ ತಾಕಿಸದೆ ಹಸಿಹಸಿಯಾಗಿಯೇ ತಿನ್ನಬೇಕೆನ್ನುವ ಸಿದ್ಧಾಂತದಲ್ಲಿ ಆತನಿಗೆ ವಿಶ್ವಾಸಭಕ್ತಿಗಳು. ಗಾಂಧೀಜಿಯಬಳಿ ಅದನ್ನೇ ವಿವರಿಸುತ್ತ ಅವರೂ ಆ ವಿಧಾನವನ್ನು ಅವಲಂಬಿಸುವ ಹದವನ್ನು ಆತ ಸೂಚಿಸಿದನು. ಈ ವಿಷಯದಲ್ಲಿ ಗಾಂಧೀಜಿಯವರು ತಮ್ಮ ಸ್ವಂತ ದೇಹದಲ್ಲಿಯೇ ಪರೀಕ್ಷೆ ನಡೆಸಿ ನೋಡತಕ್ಕ ಕುತೂಹಲವುಳ್ಳವರು. ಆತನ ಮಾತುಗಳನ್ನು ವಿಶ್ವಾಸದಿಂದ ಕೇಳಿದಮೇಲೆ "ಈ ವಿಧಾನವನ್ನು ನಾನು ಹೇಗೆ ಪ್ರಾರಂಭಿಸಬೇಕೆಂಬುದನ್ನೇನೋ ಹೇಳಿದಿರಿ. ಆದರೆ ಜೋಕೆಯಿರುವುದಷ್ಟೆ! ಈ ಪ್ರಾಂತದಲ್ಲಿರುವಾಗ ನನ್ನ ಆರೋಗ್ಯದಲ್ಲಿ ಏನಾದರೂ ಹೆಚ್ಚುಕಡಿಮೆಯಾದರೆ ನನ್ನೊಂದಿಗೆ ನಿಮ್ಮನ್ನೂ ಇಲ್ಲಿಯ ಜನರು ದರ್ಫ ಮಾಡಿಬಿಡುವರು!" ಎಂದರು.

ಹಸಿಹಸಿ ವೈದ್ಯ

ಆಂಧ್ರಪ್ರಾಂತದಲ್ಲಿ ಕೆಲವು ಹಳ್ಳಿಗಾಡುಗಳ ಸಂಚಾರವನ್ನು ೧೯೨೯ರಲ್ಲಿ ಗಾಂಧೀಜಿಯವರಿಟ್ಟುಕೊಂಡರು. ಆ ಪ್ರಾಂತದ ನಾಯಕರು ದೇಶಭಕ್ತ ಕೊಂಡಾ ವೆಂಕಟಪ್ಪಯ್ಯನವರು. ಸಂಚಾರಕ್ರಮವನ್ನು ಸನ್ನಾಹಗೊಳಿಸಿ ನಿರ್ಲೋಪವಾಗಿ ನಡೆಸಿಕೊಂಬ ಕರ್ತವ್ಯಭಾರವು ಅವರದಾಯಿತು. ಎಷ್ಟೋ ಪ್ರಯತ್ನಪಟ್ಟು ಪ್ರಯಾಣದ ವೇಳೆಗಳನ್ನೂ ಸಭೆಗಳ ಕಾರ್ಯಕಲಾಪಗಳನ್ನೂ ಗೊತ್ತುಮಾಡಿದ್ದರು. ಆದರೇನು ಮಾಡಲಾದೀತು! ಹೊರಡುವ ವೇಳೆ ಬಂದರೂ ಗೊತ್ತಾದ ವಾಹನ ಬಾರದಿರುವುದು, ಒಂದು ವೇಳೆ ಹೊತ್ತಿಗೆ ಸರಿಯಾಗಿ ಬಂದರೂ ಬಂದಮೇಲೆ ತೈಲಾಭಾವವೋ ಸೊಂಟಮುರುಕೋ ಕಾಣಿಸಿಕೊಳ್ಳುವುದು, ಸಭೆ ನೆರೆದಿರುತ್ತದೆಯೆಂದು ಸಭಾಸ್ಥಲಕ್ಕೆ ಬಂದರೆ ಬರಬೇಕಾದ ಜನರೇ

ಲಷ್ಕರೀ ವಿಚಾರಣೆ

ಬಾರದಿರುವುದು, ಹಣಕೂಡಿಸುವುದರಲ್ಲಿ ಪ್ರಯತ್ನ ಶುಷ್ಕವೆನಿಸುವುದು ಇತ್ಯಾದಿಯಾಗಿ ದಿನದಿನವೂ ಯುದ್ಧಕಾಲದ ಶಸ್ತ್ರಾಭ್ಯಾಸವೆಂಬಂತಾಯಿತು. ಹೀಗಾದ ಸಂದರ್ಭಗಳಲ್ಲಿ ಕೊಂಡಾ ವೆಂಕಟಪ್ಪಯ್ಯನವರನ್ನು ಕಂಡು ಬಾಪುಜಿ "ಈ ಹೊತ್ತು ಕಾರ್ಯಕ್ರಮ ತಪ್ಪಿದರೆ ಸಾಯಂಕಾಲ ನಿಮ್ಮನ್ನು ಲಷ್ಕರೀ ವಿಚಾರಣೆ ದಂಡನೆಗಳಿಗೆ ಗುರಿಪಡಿಸದೆ ಬಿಟ್ಟೇನೆಯೇ!" ಎನ್ನುವರು. ಕೆಲಸಕಾರ್ಯಗಳು ನಿರೀಕ್ಷಿಸಿದಂತೆ ನಾಗದಿರಲು ಸಂಜೆ ಕವಿದಕೂಡಲೆ ಖಿನ್ನತೆಯನ್ನು ತಾಳಿ ಕೊಂಡಾ ವೆಂಕಟಪ್ಪಯ್ಯನವರು ದೀನಸ್ವರದಿಂದ "ಏನು ಮಾಡುವುದು! ಅಂಥರಿಗಿನ್ನೂ ತಕ್ಕಷ್ಟು ಯೋಗ್ಯತಾಸಂಪಾದನೆಯಾಗಿಲ್ಲ!" ಎನ್ನುವರು. ಆಗ ಅವರ ಮುಖವನ್ನು ಕಂಡು ಬಾಪುಜಿ ಹೃದಯಪೂರ್ವಕವಾಗಿ ನಕ್ಕು ಅವರನ್ನೂ ನಗಿಸುವರು. ಇದಿಷ್ಟೇ ಆ ಲಷ್ಕರೀ ವಿಚಾರಣೆ ದಂಡನೆಗಳು.

ಕೊಂಡಾ ವೆಂಕಟಪ್ಪಯ್ಯನವರಂತೆ ಬಾಬು ರಾಜೇಂದ್ರಪ್ರಸಾದರು, ಸರದಾರ್ ವಲ್ಲಭ್ಬಾಯಿ ಪಟೇಲರು, ಮಹಾದೇವಭಾಯಿ, ಗಂಗಾಧರರಾವ್ ದೇಶಪಾಂಡೆ ಮುಂತಾದವರು ಗಾಂಧೀಜಿಯ ಬಳಿ ಸಲಿಗೆಯುಳ್ಳವರಾದಾಗ್ಗೂ ಸ್ವತಂತ್ರಿಸುವ ಸಲಿಗೆಯನ್ನು ವಹಿಸಲು ಅವರೆಲ್ಲರೂ ಹಿಂಜರಿಯುವರು. ದಂಡನಾಯಕರಲ್ಲಿ ಅತಿ ಪ್ರಬಲರಾದವರು ಕೂಡ ಗಾಂಧೀಜಿಯ ಬಳಿ ಕೇವಲ ಶಿಷ್ಯರಂತೆ ವರ್ತಿಸತಕ್ಕವರು. ಅಂತಹ ದಂಡನಾಯಕರಲ್ಲೊಬ್ಬರಾಗಿದ್ದಾಗ್ಗೂ ಸಹಜ ಸ್ವತಂತ್ರವೃತ್ತಿಯನ್ನು ಬಿಡದವರು ಮತ್ತು ಬಿಡಲಾಗದವರು ಪಂಡಿತ ಜವಾಹಿರಲಾಲರು. ಗಾಂಧೀ ಜವಾಹಿರರ ಪರಸ್ಪರ ಸಂಬಂಧಕ್ಕೆ ಸಾಟಿಯಾದುದನ್ನು ಹುಡುಕುವುದು ವ್ಯರ್ಥವಾದ ಕೆಲಸ. ಅವರಿಬ್ಬರ ಬಾಂಧವ್ಯವೆಂಬುದು ಅಡಗದ ಚೈತನ್ಯ ದೇವತೆಗಳು ಕಂಡು ಹಿಗ್ಗುವ ದೃಶ್ಯವಿನಾ ಬೇರೆಯಲ್ಲ. ಗಾಂಧೀಜಿಯ ಸಮುಖದಲ್ಲಿ ನಿಂತಾಗ ಭಾರತೀಯನಾದಾತನಿಗೆ ದೇವರೆದುರಿನಲ್ಲಿ ನಿಂತಂತಾಗಿ ಸರ್ವಚೈತನ್ಯವೂ ಉಡುಗಿ ಹೋಗುವುದು ಸಾಮಾನ್ಯ. ಜವಾಹಿರಲಾಲರ ಚೈತನ್ಯಕ್ಕೆ ಎಂತಹ ಸಂದರ್ಭವಾದರೂ ಅಡಗುವುದಾಗಲಿ ಉಡುಗುವುದಾಗಲಿ ಬಿಲ್‌ಖುಲ್ ಸಾಧ್ಯವಿಲ್ಲ. ಆದ್ದರಿಂದ ಇತರರಿಗೆ ಸಾಧ್ಯವಲ್ಲದ ಹಾಸ್ಯವನ್ನು ಗಾಂಧೀಜಿ

ಯವರಬಳಿ ಜವಾಹಿರಲಾಲರು ಎಸಗಿಬಿಡುವರು. ಇತರರಿಗೆ ಸಾಹಸವೆನಿಸ ತಕ್ಕ ವರ್ತನೆ ಜವಾಹಿರಲಾಲರಿಗೆ ಸಹಜವಾದುದು. ಹಿಂದೊಂದು ಸಮಯದಲ್ಲಿ ಮೋತಿಲಾಲರು ಸ್ವಲ್ಪ ರೋಷಕ್ಕೆಡೆಗೊಟ್ಟು ಗಾಂಧೀಜಿ ಯವರನ್ನು "ನನ್ನ ಏಕಮಾತ್ರ ಪುತ್ರನಿಗೆ ಮಾಯಾಮಂತ್ರವನ್ನು ಬೀರಿ ನಿಮ್ಮ ಬುಟ್ಟಿಯಲ್ಲಿ ಹಾಕಿಕೊಂಡಿರಿ" ಎಂದುದಕ್ಕೆ "ಸಿಂಹದ ಹೊಟ್ಟೆಯಲ್ಲಿ ಹುಟ್ಟುವುದು ಸಿಂಹದ ಮರಿಯಲ್ಲದೆ ಜಂಬುಕದ ಮರಿ ಯಲ್ಲ" ಎಂಬ ಉತ್ತರ ಹೊರಟುದು ಎಲ್ಲರಿಗೂ ನೆನಪಿನಲ್ಲಿರಬಹುದು.

ಇವರಿಬ್ಬರ ಮಾತುಕಥೆಗಳಲ್ಲಿ ಹಾಸ್ಯದ ಸಂದರ್ಭಗಳೊಂದೆರಡನ್ನು ಕಾಣುವ ಮೊದಲು ತಿಳಿದಿರಬೇಕಾದ ಅಂಶವೊಂದುಂಟು. ಕೆನ್ಯೂಟ್ ದೊರೆಯ ಕಥೆಯೆಲ್ಲರಿಗೂ ತಿಳಿದೇ ಇದ್ದೀತು. ಸೌಥಾಂಪ್ಟನ್ ರೇವುಪಟ್ಟಣದ ಅಡುಗೂಲಜ್ಜಿಯ ವೃತ್ತಾಂತವು ಅದರಷ್ಟು ಪ್ರಸಿದ್ಧಿಯನ್ನು ಪಡೆ ದಿಲ್ಲ. ಆ ತೀರಪಟ್ಟಣದಲ್ಲಿ ಪಾರ್ಟಿಂಗ್ಟನ್ ಎಂಬ ಹೆಸರಿನ ಮುದುಕಿ ಸಮುದ್ರದ ಅಂಚಿನಲ್ಲಿ ಮನೆಮಾಡಿಕೊಂಡಿದ್ದಳು. ಮುದುಕಿಯೆಂದರೆ ಸಾಮಾನ್ಯ ಮುದುಕಿಯಲ್ಲ. ನಿತ್ಯವೂ ವಿಜೃಂಭಿಸುತ್ತಿದ್ದ ಆಕ್ಷೇಪಣೆ ಗಳ ಪರಂಪರೆಯ ಮೂಲಕ ಆಕೆಯ ಪೌರುಷಸಾಹಸಗಳು ನೆರೆಹೊರೆ ಯವರಿಗೆ ಚನ್ನಾಗಿ ತಿಳಿದಿದ್ದವು. ಮೊರ ಪೊರಕೆಗಳನ್ನು ಹಿಡಿದು ಗುಡಿ

**ರೇವುಪಟ್ಟಣದ ಮುದುಕಿ**

ಸುವುದಕ್ಕೆ ಹೊರಟರೆ ಆ ವೃದ್ಧೆ ಯಾರನ್ನೂ ಲಕ್ಷ್ಯ ಮಾಡುತ್ತಿರಲಿಲ್ಲ. ಮನೆ ಮುಂದಿನ ಅಂಗಳವನ್ನು ದಿನಕ್ಕಿಪ್ಪತ್ತುಸಲ ಚೊಕ್ಕಟ ಮಾಡುತ್ತ ಅಕ್ಕಪಕ್ಕದವ ರಲ್ಲಿ ದೋಷಾರೋಪಣೆ ಮಾಡಿದ್ದೂ ಮಾಡಿದ್ದೇ. ಒಂದು ದಿನ ಅಂಗಳವನ್ನು ಗುಡಿಸುತ್ತಿದ್ದಾಗ ಸಮುದ್ರದ ನೀರು ಮುಂದಕ್ಕೆ ಸ್ವಲ್ಪ ನುಗ್ಗಿಬಂದಿತು. ಧ್ವಜವನ್ನೆತ್ತಿ ಧಾಳಿ ಹೊರಟ ಸಿಪಾಯಿಯಂತೆ ಆ ಮುದುಕಿ ತನ್ನ ಬರ್ಲು ಹಿಡಿದು ಹೊರಟಳು ಸಮುದ್ರದ ನೀರಿಗೆ ಬುದ್ಧಿ ಕಲಿಸುವುದಕ್ಕೆ. ಆಕೆಯ ಪೊರಕೆಯ ಸ್ಪರ್ಶದಿಂದ ಸಮುದ್ರನಿಗೆ ರೇಗಿತು. ಅದೂ ಅಟ್ಲಾಂಟಿಕ್ ಸಾಗರ! ದೊಡ್ಡ ದೊಡ್ಡ ಅಲೆಗಳೆದ್ದು ಮೇಲೆ ಮೇಲೆ ಬಂದು ಪೊರಕೆ ಹಿಡಿದಿದ್ದ ಮುದುಕಿಯನ್ನೂ ಅವಳ ಮನೆ ಯನ್ನೂ ಮುಳುಗಿಸಿಬಿಟ್ಟವು. ಈ ಮುದುಕಿಯ ವೃತ್ತಾಂತವು ಕೆನ್ಯೂಟ್

ದೊರೆಯ ಕಥೆಯಂತೆಯೋ ಇಂಗ್ಲಿಷ್ ಮಾತುಕಥೆಗಳಲ್ಲಿ ಅಲ್ಲಲ್ಲಿ ತಲೆ ದೋರುವುದುಂಟು. ಇನ್ನು ಜವಾಹಿರರ ಹಾಸ್ಯವನ್ನು ಕೇಳೋಣ.

ಸೇವಾಗ್ರಾಮವೆಂದು ಈಗ ಹೆಸರಾಗಿರುವ ಹಳ್ಳಿಯಲ್ಲಿ ಗಾಂಧೀಜಿಯವರು ನೆಲೆಸಿದಾಗ ಆ ಗ್ರಾಮಸ್ಥರನೇಕರನ್ನು ಮಲೇರಿಯ ಜ್ವರವು ಹಿಡಿದು ಬಾಧಿಸುತ್ತಿತ್ತು. ಜನರ ದಾರಿದ್ರ್ಯವನ್ನೂ ರೋಗವನ್ನೂ ಕಂಡು ಮನಸ್ಸಿನಲ್ಲಿ ಅಪಾರಯಾತನೆಯನ್ನುಪಟ್ಟು ಗಾಂಧೀಜಿಯವರು ಆ ರೋಗಿಗಳ ಚಿಕಿತ್ಸೆಗೂ ಉಪಚಾರಕ್ಕೂ ತಾವೇ ತೊಡಗಿದರು. ತಿಂಗಳ ಗಟ್ಟಲೆ ಗಾಂಧೀಜಿಗೆ ಇದೇ ಕೆಲಸವಾಯಿತು. ಅಲ್ಲಿಗೆ ಬಂದವರು "ಇದೇನು ಅನ್ಯಾಯ! ಬೆಟ್ಟದಂತಹ ಕಾರ್ಯಭಾರವನ್ನು ಹೊತ್ತಿರುವಾತನು ತನ್ನ ಅಮೂಲ್ಯ ಕಾಲವನ್ನು ಈರೀತಿ ಕಳೆಯುವನಲ್ಲ! ಇಲ್ಲಿಗೆ ಬಂದು ವಿಶ್ರಾಂತಿ ಲೇಶವೂ ಇಲ್ಲದೆ ಈ ಬಡಪಾಯಿಗಳ ಶುಶ್ರೂಷೆಗೆ ನಿಂತನಲ್ಲ!" ಎಂದು ಆತ್ಮಗತವಾಗಿ ಹೇಳಿಕೊಳ್ಳುವುದೆಷ್ಟೋ ಅಷ್ಟುಮಾತ್ರವೇ. ಇತರರಂತೆ ಜವಾಹಿರಲಾಲರೂ ಬಂದರು. ಆ ವರ್ಷ ಜವಾಹಿರರು ರಾಷ್ಟ್ರಪತಿಗಳು, ಸಮಸ್ತ ಭಾರತದ ಕಾಂಗ್ರೆಸ್ ಮಂಡಲಿಗೆ ಸರ್ವಾಧ್ಯಕ್ಷರು.

ಮಲೇರಿಯ ವ್ಯಾಧಿಯನ್ನು ಶಮನಗೊಳಿಸಲು ತೊಡಗಿ ಆ ಹಳ್ಳಿಯ ನಿರ್ಗತಿಕರಿಗೆ ಸ್ವಯಂಶುಶ್ರೂಷೆ ನಡೆಸುತ್ತಿದ್ದ ಗಾಂಧೀಜಿಯನ್ನು ಕಂಡು ಜವಾಹಿರಲಾಲರು "ಇದೇನು ಉದ್ಯೋಗ! ಕೆನ್ಯೂಟ್ ದೊರೆ ಸಮುದ್ರವನ್ನು ನಿರೋಧಿಸಲು ಯತ್ನಿಸಿದಂತೆಯೋ ಮತ್ತೊಬ್ಬರು ಸಮುದ್ರವನ್ನು ಗುಡಿಸಿ ತಳ್ಳಿಬಿಡಲು ಯತ್ನಿಸಿದಂತೆಯೋ ಕೆನ್ಯೂಟ್ ದೊರೆ ಇದೆ" ಎಂದರು. ಅದಕ್ಕೆ ಪ್ರತಿಯಾಗಿ ನಗುತ್ತ ಗಾಂಧೀಜಿ "ಅದಕ್ಕೇ ಈ ವರ್ಷ ನಿಮ್ಮನ್ನು ಕೆನ್ಯೂಟ್ ದೊರೆಯನ್ನಾಗಿ ನಾವು ಮಾಡಿಕೊಂಡಿರುವುದು!" ಎಂದರು. ಉಭಯತಃ ಸೌಹಾರ್ದದ ಅಪಹಾಸ್ಯ.

ಮತ್ತೊಂದು ಸಂದರ್ಭ ವಾರ್ಧಾದಲ್ಲಿ ತೋರಿದುದು. ಒಂದಾನೊಂದು ಸಭೆ ಮುಗಿದು ಎಲ್ಲರೂ ಹೊರಕ್ಕೆ ಬರುವ ಸಮಯ. ಹೊರಗೆ ಯಾರೋ ಒಬ್ಬ ಬಾತ್ಮಿದಾರನು ಹೊಸ ನಮೂನೆಯ ಕ್ಯಾಮಿರಾ ತಂದು

ಕಾದುಕೊಂಡಿದ್ದನು. ಹೊರಗೆಬಂದ ಜವಾಹಿರರ ಕಣ್ಣಿಗೆ ಆ ಕ್ಯಾಮಿರಾ ಬಿತ್ತು. ತಕ್ಷಣವೇ ಆ ಕಡೆ ಹೆಜ್ಜೆಹಾಕಿ ಅದನ್ನೆತ್ತಿಹಿಡಿದು ಅದರ ಕನ್ನಡಿಯನ್ನು ಹಾಗೂ ಹೀಗೂ ಸರಿಪಡಿಸುತ್ತಲಿದ್ದು

ಹುಡುಗಾಟ!

ಗಾಂಧೀಜಿಯವರು ಕಾಣಿಸಿಕೊಂಡಕೂಡಲೆ ಅವರ ಕಡೆ ತಿರುಗಿಸಿ ಗುರಿಯಿಟ್ಟರು. ಅದನ್ನು ಕಂಡು ಬಾಪು ನೇರವಾಗಿ ಅಲ್ಲಿಗೆ ನಡೆದು ತಮ್ಮ ಊರುಗೋಲನ್ನು ಕ್ಯಾಮಿರಾ ಕಂಡಿಯಲ್ಲಿ ಚುಚ್ಚಿ ನಗುತ್ತ "ಇದೇನು ಹುಡುಗಾಟ!"ವೆನ್ನುತ್ತ ಪಕ್ಕಕ್ಕೆ ಹೊರಟರು.

ಹಾಸ್ಯದ ವೃತ್ತಾಂತಗಳೇ ಸಮೃದ್ಧಿಯಾಗಿಹೋದವು. ಸ್ವಂತ ಚರ್ಯೆಯಲ್ಲಿ ವಿನೋದಗೊಳ್ಳುವುದೇನು, ಸಾಮಾನ್ಯ ಸಲ್ಲಾಪಗಳಲ್ಲಿ ಸ್ವಾರಸ್ಯ ತುಂಬುವುದೇನು, ವ್ಯಸನದಂಶನವಾದಾಗ ಉಲ್ಲಾಸಗೊಳಿಸುವುದೇನು, ಸಂಭಾಷಣೆಗಳಲ್ಲಿ ಪ್ರತ್ಯುತ್ತರಸ್ಫೂರ್ತಿಯೇನು, ಬುದ್ಧಿಕಲಿಸುವ ಅಪಹಾಸ್ಯದ ಮಿತಿಯೇನು, ಆಪ್ತರೊಡನೆ ಸಲಿಗೆಯಿಂದಾಡುವ ಬಗೆಯೇನು ಎಲ್ಲವನ್ನೂ ದೃಷ್ಟಾಂತಸಹಿತವಾಗಿ ಕಂಡುದಾಯಿತು. ಹಾಸ್ಯದ ಸಂದರ್ಭಗಳನ್ನು ಕೇಳಿದಷ್ಟೂ ಕುತೂಹಲವೇರುವುದು ಸಹಜ. ನಗುವನ್ನು ತಡೆಯಲು ಹಸಿವಿಗೂ ಶಕ್ತಿಯಿಲ್ಲ; ಬೇರೆ ಕಾರಣಗಳಿಂದ ತಾತ್ಕಾಲಿಕವಾಗಿ ತಡೆದರೆ ತರುವಾಯ ಒಂದಕ್ಕೆರಡರಂತೆ ನಗಬೇಕಾಗುವುದು. ಗಾಂಧೀಜಿಯ ಜೀವನಚರಿತ್ರೆಯಲ್ಲಿ ಹಾಸ್ಯತೋರುವ ಸನ್ನಿವೇಶಗಳಿಗೆ ಕೊರತೆಯಿಲ್ಲ. ಭಗವದ್ಗೀತೆಯ ಶ್ಲೋಕಗಳನ್ನು ಗಟ್ಟಿಮಾಡಿದುದು ಬಚ್ಚಲಮನೆಯಲ್ಲಿ! ಚಪಲ

ಹದಿನಾರರಲ್ಲಿ ಒಂದಾಣೆ

ಚಿತ್ತನೊಬ್ಬನು ಕಾಣಿಕೆಯಾಗಿ ಒಂದು ಬಿಡಿಗಾಸನ್ನು ಸಮರ್ಪಿಸಿದರೆ ಆ ಬಿಡಿಗಾಸು ಐದುರೂಪಾಯಿಗಳಿಗೆ ಹರಾಜು! ಸಿಮ್ಲಾ ಪಟ್ಟಣದಲ್ಲಿ ವೈಸರಾಯ್ ಲಾರ್ಡ್ ಇರ್ವಿನ್ನರೊಡನೆ ಶಾಂತಿಸಂಧಾನದ ಮಾತುಕಥೆಗಳಾಗುತ್ತಿದ್ದಾಗ ಈ ಮಹಾತ್ಮನ ವಿತರಣೆಯ ಊಟದ ಬುತ್ತಿಯನ್ನು ಹೊತ್ತುಕೊಂಡು ಒಂದೆರಡುಮೈಲಿ ದೂರವನ್ನು ಮಿಾರಾಬೆ಼ನ್ ಕಾಲ್ನಡಿಗೆಯಿಂದ ನಡೆಯಬೇಕು! ದಸ್ತಗಿರಿಯ ಅಪ್ಪಣೆಯನ್ನು ಹಿಡಿದುಬಂದ ಪೋಲೀಸ್ ಅಧಿಕಾರಿಗಳಾಗಲಿ, ನ್ಯಾಯಸ್ಥಾನದಲ್ಲಿ ಗಂಭೀರವಾಗಿ ಕುಳಿತು

ಅಪರಾಧಿಗಳನ್ನು ದಂಡಿಸುವ ದಂಡಧಾರಿಯಾಗಲಿ, ಜೈಲುಖಾನೆಯಲ್ಲಿ ತಮ್ಮಮೇಲೆ ಕಾವಲಿಗೆಂದಿದ್ದ ಘಾತಕರಾಗಲಿ ಯಾರಾದರಾಗಲಿ ಎಲ್ಲರಲ್ಲಿಯೂ ಸಹಾಸವದನರಾಗಿರತಕ್ಕವರು ಗಾಂಧೀಜಿ. ಹಾಸ್ಯದ ಸನ್ನಿವೇಶಗಳನ್ನೆಷ್ಟುಬೇಕಾದರೂ ಕಾಣಬಹುದು. ಆದರೆ ಗಾಂಧೀಜಿಯ ಹಾಸ್ಯವನ್ನುಮಾತ್ರ ಬಣ್ಣಿಸಿಕೊಂಡರೆ ಆ ವ್ಯಕ್ತಿಯನ್ನು ಕಂಡಂತಾಗಲಿಲ್ಲ. ಹದಿನಾರಾಣೆಯಲ್ಲಿ ಒಂದಾಣೆಯನ್ನು ಮಾತ್ರ ನೋಡಿದಂತಾಯಿತು. ನಕ್ಕಹಾಗೆಯೇ ಅವರು ಅಳಲೂ ಬಲ್ಲರೆಂಬುದನ್ನು ನಾವು ಮರೆಯುವ ಹಾಗಿಲ್ಲ. ಜೀವನಚರಿತ್ರೆಯನ್ನು ಬಲ್ಲವರೆಲ್ಲರಿಗೂ ೧೯೨೪ನೆ ವರ್ಷ ಮಧ್ಯದಲ್ಲಿ ಸೇರಿದ ಅಖಿಲಭಾರತ ಕಾಂಗ್ರೆಸ್ ಕಮಿಟಿಯಲ್ಲಿ ಗಾಂಧೀಜಿಯವರು ಅತ್ತ ದೃಶ್ಯವು ನೆನಪಾಗಬಹುದು. ಅತ್ತು ಗೋಳಿಟ್ಟಂತೆ ಕಣ್ಣೀರನ್ನು ಧಾರೆಧಾರೆಯಾಗಿ ಐದುನಿಮಿಷಕಾಲ ಬಿಟ್ಟ ಮತ್ತೊಂದು ಸಂದರ್ಭವನ್ನು ಬೆಂಗಳೂರಿನವರು ಸ್ಮರಿಸಿಕೊಳ್ಳಬಹುದು.

**ಬೆಂಗಳೂರಿನ ಭಾಗ್ಯ**

೧೯೨೭. ಗಾಂಧೀಜಿಯವರಿಗೆ ನಿಶ್ಶಕ್ತಿ, ಕುಮಾರ ಪಾರ್ಕಿನಲ್ಲಿ ವಿಶ್ರಾಂತಿಯ ಬಿಡಾರದ ಕಾಲ. ಆ ಸಮಯವನ್ನುಪಯೋಗಿಸಿಕೊಂಡು ಜೂನ್ ತಿಂಗಳಲ್ಲಿ ದಕ್ಷಿಣ ಭಾರತಕ್ಕೆಲ್ಲ ಖಾದಿ ಪ್ರದರ್ಶನವು ದೇಶೀಯ ವಿದ್ಯಾಶಾಲೆಯ ಕಟ್ಟಡದಲ್ಲಿ ಆಗಲೆಂಬ ನಿಶ್ಚಯವಾಯಿತು. ತಮಿಳುನಾಡು, ಆಂಧ್ರಪ್ರಾಂತ, ಮಹಾರಾಷ್ಟ್ರ, ಕರ್ಣಾಟಕ ಪ್ರಾಂತಗಳ ಖಾದೀ ಭಕ್ತರೆಲ್ಲರೂ ಸಹಕರಿಸಿದರು. ಕಾಶ್ಮೀರ ಬಿಕಾನೇರು ಬಿಹಾರ ಕಾಮರೂಪಗಳಿಂದ ಅಪೂರ್ವವೆನಿಸಿದ ವಸ್ತುಗಳು ಬಂದಿದ್ದವು. ಖಾದಿಯ ಸಂಬಂಧವಾಗಿ ಸಮಸ್ತವನ್ನೂ ಜನರಿಗೆ ತಿಳಿಸಲು ತಕ್ಕಂತೆ ಚಿತ್ರಪಟಗಳನ್ನೇರ್ಪಡಿಸಿತ್ತು. ಅರಳೆ ಬಿಡಿಸುವುದು, ಎಕ್ಕುವುದು, ಬತ್ತಿಮಾಡುವುದು, ನೂಲುವುದು, ನೇಯುವುದು, ಅಂಚುಕಟ್ಟುವುದು ಮುಂತಾದ ಎಲ್ಲ ಕೆಲಸಗಳನ್ನೂ ಕಣ್ಣಾರೆ ಕಾಣುವಂತೆ ವ್ಯವಸ್ಥೆಯಾಗಿತ್ತು. ಅತಿದೂರದ ಗ್ರಾಮಾಂತರಗಳಿಂದ ಬಂದ ಬಡಪಾಯಿಗಳು ಕಣ್ಣೆದುರಿಗೆ ಆ ಕೆಲಸಗಳನ್ನು ನಡೆಸುತ್ತಿದ್ದರು. ಪ್ರದರ್ಶನ ಕ್ಷೇತ್ರವೆಲ್ಲ ಪವಿತ್ರತೆಯಿಂದ ತುಂಬಿದಂತಿತ್ತು. ಆದರೇನು! ಅನ್ಯಸ್ಥಳಗಳಿಂದ ಬಂದು ಬೆಂಗಳೂರಿನಲ್ಲಿ

ತತ್ಕಾಲದಲ್ಲಿದ್ದವರೆಲ್ಲರೂ ಪ್ರದರ್ಶನವನ್ನು ಆತುರದಿಂದ ನೋಡಿದರು, ಬೆಂಗಳೂರಿನ ಜನರಲ್ಲಿ ಬಹು ಭಾಗದವರು ಅಲ್ಲಿಗೆ ಬಾರದಾದರು. ಪ್ರದರ್ಶನದಲ್ಲಿ ಜನಸಂದಣಿಯೇನೋ ಇತ್ತು; ಆದರೆ ಸ್ಥಲವಂತರ ಗುಂಪಿಲ್ಲ. ಕ್ರಿಸ್ಮಸ್ ರಜದಲ್ಲಿ ಕಬ್ಬನ್ ಪಾರ್ಕಿನಲ್ಲಿ ವಿನೋದಗಳೇರ್ಪಾಟಾದಾಗ ಕಿಕ್ಕಿರಿದು ನುಗ್ಗುವ ಬೆಂಗಳೂರಿನ ನಾಗರಿಕರನೇಕರಿಗೆ ಖಾದಿ ಪ್ರದರ್ಶನದ ಅವಶ್ಯಕತೆಯಾಗಲಿ ಆಕರ್ಷಣೆಯಾಗಲಿ ಸೋಕಲಿಲ್ಲ.

ಪ್ರದರ್ಶನದ ಎಂಟು ದಿನಗಳು ಕಳೆದವು. ಮುಕ್ತಾಯವಾಗಿ ಬಹುಮಾನಗಳನ್ನು ಗಾಂಧೀಜಿಯವರಿಂದ ಕೊಡಿಸಲು ಬೆಳಿಗ್ಗೆ ಸಭೆಯನ್ನು ಶಾಲೆಯ ಆವರಣದ ಬಯಲಿನಲ್ಲಿ ಏರ್ಪಡಿಸಿದರು. ಸಭೆಯ ಏರ್ಪಾಟುಗಳನ್ನು ನಡೆಸುತ್ತ ಓಡಾಡುತ್ತಿದ್ದವರನೇಕರು ಶ್ರೀ ಟಿ. ಪಿ. ಕೈಲಾಸಂ ಸ್ನೇಹಿತರು. ಕೈಲಾಸಂ ಹೆಸರನ್ನು ಕೇಳದ ಕನ್ನಡಿಗರುಂಟೆ! ಕನ್ನಡನಾಡಿಗೆ ರತ್ನವೆಂದೆನಿಸಿಕೊಂಡು ರಂಜಕದಂತಹ ಮನಸ್ಸನ್ನು ಯದ್ವಾತದ್ವಾ ಎನ್ನುವ ರೀತಿಯಲ್ಲಿ ಹೊರಗೆ ಬೀರಿ ನಟಿಸುವ ಕೈಲಾಸಮ್ಮಿನ ಅಂತರಂಗವನ್ನು ಆ ಸ್ನೇಹಿತರು ಬಲ್ಲವರು. ಆದುದರಿಂದ ಕೈಲಾಸಂ ಬರುವುದನ್ನೇ ಕಾದಿದ್ದು ಆತನು ಬರುತ್ತಲೆ ರಟ್ಟೆಹಿಡಿದು ವೇದಿಕೆಯ ಬಳಿ ಕರೆದುಕೊಂಡುಹೋಗಿ ಕೂರಿಸಲು ಸಿದ್ಧರಾದರು. ಆದರೆ ಆತನಲ್ಲಿ ನಲಿಗೆಯ ಅಧಿಕಾರವನ್ನು ಪಡೆದಿದ್ದ ಆ ಮಿತ್ರರು ಒಂದೆರಡು ಕ್ಷಣದಲ್ಲಿಯೇ ಅಪ್ರತಿಭರಾಗಬೇಕಾಯಿತು. ಒಳಗೆ ಕಾಲಿಟ್ಟಕೂಡಲೇ ದೂರದಿಂದ ಗಾಂಧೀಜಿಯ ಮುಖವನ್ನು ಕಂಡ ಕೈಲಾಸಂ ಒಂದು ಮೂಲೆಯಲ್ಲಿ ನಿಂತು ಎಂದೂ ತಾಳದ ಖಿನ್ನತೆಯನ್ನು ಮುಖದಲ್ಲಿ ತಾಳಿದನು. ಆಪ್ತರಾದ ಮಿತ್ರರಲ್ಲೊಬ್ಬಾತನು "ಏಕೆ, ಕೈಲಾಸಂ, ಏಕೆ ಹೀಗಿದ್ದೀ?" ಎಂದು ಕೇಳಿದನು. "ಷಟಪ್ ಯು ಆಸ್! ಅಲ್ಲಿರುವುದು ಯಾರು, ಆತನಿರುವುದೆಷ್ಟು, ಆತನ ಮಹಿಮೆಯೆಷ್ಟು, ಬ್ರಿಟಿಷರ ಸಾಮ್ರಾಜ್ಯವನ್ನು ನಡುಗಿಸತಕ್ಕವನು ಹೇಗಿದ್ದಾನೆ ನೋಡು, ಫೂಲ್!" ಎಂಬ ಉತ್ತರ ಬಂತು. ನಿಂತಿದ್ದೆಡೆಯಲ್ಲಿ ಊರಿದ ಹೆಜ್ಜೆಯನ್ನೆತ್ತಲಿಲ್ಲ ಕೈಲಾಸಂ ಆ ಹೊತ್ತು. ಎಂಥವರನ್ನಾದರೂ ತನ್ನ ಹಾಸ್ಯದಲ್ಲಿ ಸಿಕ್ಕಿಸಿಕೊಳ್ಳದೆ

ಕೈಲಾಸಂ

ಬಿಡತಕ್ಕವನಲ್ಲ; ಗಾಂಧೀಜಿಯೆಂದರೆ ಮಾತ್ರ ಕೈಲಾಸಮ್ಮಿಗೆ ಪರಮಾತ್ಮ ಸ್ವರೂಪ.

ಸಭೆಯಲ್ಲಿ ನಡೆದುದೇನು? ವೇದಿಕೆಯ ಬಳಿ ಶ್ರೀ ರಾಜಾಜಿ, ಮಹಾದೇವಭಾಯಿ, ರಾಜೇಂದ್ರಪ್ರಸಾದ್, ಗಂಗಾಧರರಾವ್ ಮುಂತಾದವರದೊಂದು ಗುಂಪು. ಅಲ್ಲಿಯೇ ಪಂಡಿತ ಮದನಮೋಹನ ಮಾಲವೀಯರೊಂದುಕಡೆ, ಸರ್ ಚಾರ್ಲ್ಸ್ ಟಾಡ್‌ಹಂಟರಿನ್ನೊಂದುಕಡೆ. ವೇದಿಕೆಯ ಎದುರಿಗೆ ಉಳಿದ ಜನರು ಕುರ್ಚಿಗಳಲ್ಲಿ ಕುಳಿತಿದ್ದರು. ಆದರೆ ಬೆಂಗಳೂರಿನ ಜನರ ಗುಂಪು ಕಡಿಮೆ. ಆ ಹೊತ್ತು ಮತ್ತೊಂದೆಡೆಯಲ್ಲಿ ಕುದುರೆ ಜೂಜು! ಗಾಂಧೀಜಿಯವರು ಬರುವ ಸಭೆಯೆಂದರೆ ಸಾಮಾನ್ಯವಾಗಿ ಸೇರುವ ಜನಸಮುದಾಯವೆಷ್ಟೆಂದು ಎಲ್ಲರಿಗೂ ತಿಳಿದಿರುತ್ತದೆಯಷ್ಟೆ. ಆಹೊತ್ತು ಗಾಂಧೀಜಿಯವರು ಅಧ್ಯಕ್ಷರಾಗಿರುವುದು ಮಾತ್ರವೇ ಅಲ್ಲ, ದೊಡ್ಡ ಪ್ರದರ್ಶನದ ಮುಕ್ತಾಯದ ಸಮಾರಂಭ.

ಸಭಾಸ್ಥಿತಿ

ನೆರಿದ ಸಭೆ ದೊಡ್ಡದಾದರೂ ಆ ಸಮಯಕ್ಕೆ ತಕ್ಕಷ್ಟು ದೊಡ್ಡದಲ್ಲ. ಬೆಂಗಳೂರಿನ ಜನರಿಗೆ ಕುದುರೆ ಜೂಜು ಮುಖ್ಯವೆನಿಸಿಬಿಟ್ಟಿತ್ತು. ವೇದಿಕೆಯ ಮೇಲೆ ಕುಳಿತ ಬಳಿಕ ಗಾಂಧೀಜಿಯವರು ಸಭಿಕರನ್ನು ಕಂಡಾಗ ಎದುರಿಗೆ ನೆರೆದಿದ್ದ ಗುಂಪಿನಲ್ಲಿ ಮುಕ್ಕಾಲು ಭಾಗದವರು ಪರದೇಶೀ ಬಟ್ಟೆಬರೆಗಳನ್ನು ಪರದೇಶೀ ವೈಖರಿಯಿಂದ ಧರಿಸಿ ಕಣ್ಣು ಕುಕ್ಕುವವರೇ ಆಗಿದ್ದರು. ಅಪಾರಾನುಭವದಿಂದ ವಿದಗ್ಧರಾದ ಗಾಂಧೀಜಿಯವರಿಗದು ಹೊಸದಲ್ಲ. ಪಂಡಿತ ಮದನಮೋಹನ ಮಾಲವೀಯರಿರುವ ಸಭೆಯಲ್ಲಿ ಅಧ್ಯಕ್ಷರಾಗುವ ತಮ್ಮ ತಪ್ಪನ್ನು ಅವರು ಮನ್ನಿಸಿಕೊಡಬೇಕೆಂದು ಮೊದಲೊಂದೆರಡು ಮಾತನ್ನು ನಿಶ್ಶಕ್ತಿಯಿಂದ ಕುಗ್ಗಿದ ಕಂಠಸ್ವರವನ್ನೆತ್ತಲಾರದೆ ಹೇಳಿ ಗೊತ್ತಾದ ಕಾರ್ಯಕ್ರಮವನ್ನು ನಡೆಸಲಾರಂಭಿಸಿದರು. ಅತಿ ಸಮೀಪದಲ್ಲಿದ್ದವರಿಗೆ ಮಾತ್ರ ಅವರ ಮಾತು ಕೇಳಿಸುತ್ತಿತ್ತು.

ಬಹುಮಾನಗಳ ವಿನಿಯೋಗವೇ ಕಾರ್ಯಕ್ರಮದಲ್ಲಿ ಮುಖ್ಯವಾಗಿತ್ತು. ವಸ್ತುಪ್ರದರ್ಶಕರಿಗೆ ಮೊದಲು ಬಹುಮಾನಗಳಾದವು. ತರುವಾಯ ತಕಲೀ ಚರಖಾ ಅಭ್ಯಾಸದಲ್ಲಿ ನಿಪುಣರಿಗೆ. ಅರಳೆಯನ್ನು

ಬಿಡಿಸಿಕೊಂಡು ನೂಲುವುದರಲ್ಲಿ ಸಂಪಾದಿಸಿದ್ದ ಕೈಚಳಕಕ್ಕೆ ಬಹುಮಾನ ಹೊಂದಲು ಬೆಳಗಾಂವಿ ಬಳಿಯ ಹಳ್ಳಿಗಾಡಿನ ಒಕ್ಕಲಗಿತ್ತಿಯರು ಆಮೇಲೆ ಎದುರಾದರು. ಅವರನ್ನು ಕಂಡಕೂಡಲೆ ಗಾಂಧೀಜಿಯವರ ಮನಸ್ಸು ಕರಗಿತು. ಅವರ ತರುವಾಯ ಎಪ್ಪತ್ತುವರ್ಷದ ಮುದುಕಿ ಎದುರಿಗೆ ಬಂದಳು. ಆಂಧ್ರಪ್ರಾಂತದ ಒಂದು ಹಳ್ಳಿಯಿಂದ ಬಂದಿದ್ದ ಆ ಹಣ್ಣುಹಣ್ಣುಮುದುಕಿ ಮುನ್ನೂರು ನಂಬರಿನ ದಾರವನ್ನು ತೆಗೆಯ ತಕ್ಕವಳಾಗಿದ್ದು ನೂಲುವ ಕೆಲಸದಲ್ಲಿ ನಾಜೂಕನ್ನು ಅದ್ವಿತೀಯವಾಗಿ ಪಡೆದಿದ್ದಳು. ಆಕೆಯನ್ನು ಕಣ್ಣುತುಂಬ ನೋಡಿ ಗಾಂಧೀಜಿ ಬಹು ಮಾನವನ್ನಿತ್ತುಕೊಡುತ್ತ "ನೀನು ಶತಾಯುವಾಗಿ ಬಾಳಬೇಕು. ನಿನ್ನ ಹಸ್ತಕೌಶಲವನ್ನು ಇತರರಿಗೆ ಹೇಳಿಕೊಡಬೇಕು" ಎಂದು ಅಂತಃಕರಣ ಪೂರ್ತಿಯಾಗಿ ಹರಸಿದರು. ಆಕೆಯ ಕಣ್ಣುಗಳಲ್ಲಿ ಆನಂದಬಾಷ್ಪಗಳು ಕಾಣಿಸಿದವು. ಆಕೂಡಲೆ ಅಧ್ಯಕ್ಷರ ಮುಕ್ತಾಯಭಾಷಣವಾಗಬೇಕಾದ ವೇಳೆ. ಗಾಂಧೀಜಿಯವರು ಸಭಿಕರನ್ನುದ್ದೇಶಿಸಿ ಖಾದಿ ಚರಖಾ ಸಂಬಂಧ

ಅಶ್ರುಧಾರೆ

ವಾಗಿ ಎರಡುಮೂರು ವಾಕ್ಯಗಳನ್ನಾಡುವಷ್ಟರಲ್ಲಿಯೇ ಕಣ್ಣೀರುಕ್ಕಿಬಂದು ಗಳಗಳನೆ ಕಾರಲಾರಂಭವಾಯಿತು. ದೂರದಲ್ಲಿದ್ದವರಿಗೆ ಮಾತು ಕೇಳಿಸದೆ ಗಾಂಧೀಜಿಯ ಮುಖದ ಎರಡು ಕೆನ್ನೆಗಳಮೇಲೂ ಕಣ್ಣೀರುಸುರಿದ ಹೊಳಪು ಮಾತ್ರ ಗೋಚರವಾಗುತ್ತಿತ್ತು. ಒಂದುನಿಮಿಷವಾಯಿತು, ಗಾಂಧೀಜಿಯ ಗಂಟಲು ಕಟ್ಟಿಕೊಂಡಿತು. ಉಸಿರಾಡುವುದು ಕಷ್ಟವಾಗಿ ಮೇಲಕ್ಕೂ ಕೆಳಕ್ಕೂ ಎದೆಯೆಳದಾಡಿದಂತೆ ಕಂಡಿತು. ಸಮೀಪದಲ್ಲಿದ್ದವರಿಗೆ ದಿಕ್ಕು ತೋಚದಾಯಿತು. ಕೆಲವರು ತಾವೂ ಅತ್ತರು. ಏನಾಗುವುದೋ ಎಂಬ ಭಯಭ್ರಾಂತಿಗಳು ಅನೇಕರಿಗೆ ತೋರಿಕೊಂಡವು. ಸುಮಾರು ಐದುನಿಮಿಷಗಳಕಾಲ ಗಾಂಧೀಜಿಯವರಿಗೆ ಇಂತಹ ಅಳು. ಗ್ರಾಮಾಂತರ ಬಡಪಾಯಿಗಳ ಸಾಧುತನವನ್ನೂ ದಾರಿದ್ರ್ಯದೈನ್ಯಗಳನ್ನೂ ಕಂಡು ಹುಟ್ಟಿದ ವಿಷಾದವೊಂದುಕಡೆ; ಅವರಲ್ಲಿ ಸಹಾನುಕಂಪ ತೋರದ ಪಟ್ಟಣಿಗರ ಕಾಠಿನ್ಯಕ್ಕೆ ತೋರಿದ ಹಾಹಾಕಾರವಿನ್ನೊಂದುಕಡೆ. ಆರ್ದ್ರ ಹೃದಯವನ್ನು ಆಜನ್ಮವಾಗಿ ಹೊತ್ತಾತನ ಮನಸ್ಸು ಎರಡರ ಮಧ್ಯೆ

ಜರ್ಜರಿತವಾಗಿ ತಳಮಳಿಸುವುದಕ್ಕೆ ಕಂದಿ ಕುಂದಿದ ದೇಹಶಕ್ತಿಯು ನೆರವು ಬೇರೆ. "ಬಡಜನರ ಗೋಳನ್ನು ಕಟ್ಟಿಕೊಂಡು ರೋದಿಸುವ ಈ ಜೀವಿಯನ್ನು ಸಂತೋಷಪಡಿಸುವುದು ಹೇಗೆ? ಮರುಕದ ಮೂರ್ತಿಯಾಗಿ ಬಡಪಾಯಿಗಳ ದುಃಖಕ್ಕಾಗಿ ತಪಿಸುತ್ತಲಿರುವ ಈತನ ತಪಸ್ಸೆಷ್ಟು ಅಮೋಘ!" ಎನ್ನುವ ಯೋಚನೆಯು ಪಂಡಿತ ಮಾಲವೀಯ, ಟಾಡ್‌ಹಂಟರ್ ಮುಂತಾದವರ ಮನಸ್ಸುಗಳಲ್ಲಿ ತೋರತಕ್ಕದ್ದಾಗಿತ್ತು. ಆ ಐದುನಿಮಿಷಗಳ ಹೊತ್ತನ್ನು ಕಳೆಯುವುದು ಎಲ್ಲರಿಗೂ ಮರ್ಮಪರೀಕ್ಷೆಯಾಯಿತು. ಅಂತರಿಕ್ಷಲೋಕವೇ ಸ್ತಬ್ಧತೆಯನ್ನು ತಾಳಿದಂತಿತ್ತು. ಭಗವಂತನ ಸಂಕಲ್ಪದಿಂದ ಆ ವಿಷಮಕಾಲವು ಕಳೆಯಿತು. ಗಾಂಧೀಜಿ ಚೇತರಿಸಿಕೊಂಡು ಮುಂದಿನ ಮಾತುಗಳನ್ನು ಮೆಲ್ಲಮೆಲ್ಲನೆ ಸಂಕ್ಷೇಪವಾಗಿ ಹೇಳಿ ಸಭೆಯನ್ನು ತ್ಯಜಿಸಿಕೊಟ್ಟರು.

ಒಂದುಕಡೆ ಹೀಗೆ ಅತ್ತು ಅಳಿಸಬಲ್ಲವರು, ಮತ್ತೊಂದುಕಡೆ ಹಾಗೆ ನಕ್ಕು ನಗಿಸಬಲ್ಲವರು. ಎರಡೂ ಒಬ್ಬರಲ್ಲಿ ಅದ್ಭುತವಾಗಿ ತೋರುವ ನಮಗೆ ಇನ್ನೂ ಅದ್ಭುತವಾದ ಆ ವ್ಯಕ್ತಿಯ ಇತರಾಂಶಗಳು ಹೇಗೆ ಮನದಟ್ಟಬೇಕು? ವ್ರತಪಾಲನ ನಿಷ್ಠೆಯಲ್ಲಿ ಪ್ಯೂರಿಟನ್ ಜನರಿಗೆ ಕಡಿಮೆಯಿಲ್ಲ; ಆದರೆ ಕ್ಷಮಿಸಿಕೊಡುವ ಔದಾರ್ಯಗುಣಕ್ಕೆ ಮೇರೆಯಿಲ್ಲ. ಕೋಮಲ ಕಠೋರಗುಣಗಳು ಪರಸ್ಪರ ಪೋಷಕವಾಗಿ ನೆಲೆಸಿರುವ ವಿಸ್ಮಯಮೂರ್ತಿಯಾದ ಬಾಪೂಜಿಯ ಹಾಸ್ಯವನ್ನಾಗಲಿ ರೋದನವನ್ನಾಗಲಿ ಪರಿಪೂರ್ಣವಾಗಿ ಬಣ್ಣಿಸಿಕೊಳ್ಳುವುದು ಹೇಗೆ? ರೋದನವು ಎಷ್ಟು ಪರಿಶುದ್ಧವೋ ಹಾಸ್ಯವೂ ಅಷ್ಟೇ ಪರಿಶುದ್ಧವಾದುದರಿಂದ ಸಾಮಾನ್ಯರಿಗೆ ದುರ್ಲಭ.

ಪರಿಶುದ್ಧತೆ

ಹಾಸ್ಯದ ಪರಿಶುದ್ಧತೆಯನ್ನು ಮನಃಪೂರ್ತಿಯಾಗಿ ಕಾಣಿಸಿಕೊಡುವುದು ೧೯೨೨ನೆ ಮಾರ್ಚ್ ೧೮ನೆ ತಾರೀಖು ಶನಿವಾರ ಅಹಮದಾಬಾದ್ ಡಿಸ್ಟ್ರಿಕ್ಟ್ ಕೋರ್ಟಿನ ದೃಶ್ಯ.

೧೯೨೧—೨೨ರಲ್ಲಿ ಅಭೂತಪೂರ್ವವಾದ ಆಂದೋಲನ ಆಸೇತುಹಿಮಾಚಲವಾಗಿ ನಡೆದುಹೋಯಿತು. ೧೯೨೨ನೆ ಮಾರ್ಚ್ ೧೦ನೆ ತಾರೀಖಿನ ದಿನ ರಾತ್ರಿ ಹತ್ತೂವರೆಗೆ ಆಶ್ರಮದಲ್ಲಿ ಮಹಾತ್ಮಾಜಿಯ

ದಸ್ತಗಿರಿ ನಡೆಯಿತು. ಕೆಲವು ದಿನಗಳಿಂದ ದಸ್ತಗಿರಿಯಾಗುವುದೆಂದು ವದಂತಿಯೂ ನಿರೀಕ್ಷೆಯೂ ಹಬ್ಬಿದ್ದುದರಿಂದ ಆಶ್ರಮವಾಸಿಗಳಲ್ಲಿ ಯಾರೂ ಆಶ್ಚರ್ಯಚಕಿತರಾಗಲಿಲ್ಲ. ಎಲ್ಲರೂ ಸಮಾಧಾನ ಚಿತ್ತದಿಂದಿದ್ದು ಗಾಂಧೀಜಿಯನ್ನು ಬೀಳ್ಕೊಟ್ಟರು. ಸರ್ಕಾರದ ಅಧಿಕಾರಿಗಳು ಗಾಂಧೀಜಿಯವರನ್ನೂ ಶಂಕರಲಾಲರನ್ನೂ ಸಾಬರ್ಮತಿ ಜೈಲಿನಲ್ಲಿಟ್ಟಿದ್ದು ಮರುದಿನ ಮ್ಯಾಜಿಸ್ಟ್ರೇಟರ ಮುಂದೆ

**ಮಾಡುವ ಉದ್ಯೋಗ**

ಹಾಜರ್ ಮಾಡಿದರು. ಆರೋಪಣೆಯನ್ನು ವಿಚಾರಿಸಿ ಬರೆದುಕೊಳ್ಳುತ್ತ ಆ ದಂಡಧಾರಿಯು ಗಾಂಧೀಜಿಯವರನ್ನು "ನಿಮ್ಮ ಉದ್ಯೋಗವೇನು ?" ಎಂದು ಕೇಳಿದ್ದಕ್ಕೆ "ಜಿರಾಯತಿ ಮತ್ತು ನೇಯ್ಗೆ" ಎಂಬ ಉತ್ತರ ಸ್ಪಷ್ಟವಾಗಿ ಕೇಳಿಬಂತು. ವಿಚಾರಣೆಯನ್ನು ಶನಿವಾರ ಜಿಲ್ಲಾ ಕೋರ್ಟಿನಲ್ಲಿ ಜಿಲ್ಲಾ ಜಡ್ಜಿ ಎದುರಿಗೆ ನಡೆಸತಕ್ಕದೆಂದು ಗೊತ್ತಾಯಿತು.

ಜಿಲ್ಲಾ ಕೋರ್ಟೆಂಬುದು ನಡೆಯುತ್ತಿದುದು ದೊಡ್ಡ ಕಟ್ಟಡದಲ್ಲಲ್ಲ. ಅತಿ ಸಾಮಾನ್ಯವಾದ ಕಟ್ಟಡದ ಒಂದು ಕೋಣೆಯಲ್ಲಿ. ಅಲ್ಲಿ ನೂರು ಮಂದಿ ಸೇರುವುದಕ್ಕೂ ಸ್ಥಳ ಸಾಕಾಗುತ್ತಿರಲಿಲ್ಲ. ಆದರೂ ಸ್ಥಳ ದೊರೆತ ಎಡೆಯಲ್ಲೆಲ್ಲ ಜನರು ತುಂಬಿದ್ದರು. ಹೊರಗಡೆ ನಿಂತು ಕಿಟಕಿದ್ವಾರಗಳ ಸಂದುಗೊಂದಿಗಳಲ್ಲಿ ಎರಡು ಕಣ್ಣನ್ನೋ ಒಂದು ಕಣ್ಣನ್ನೋ ಬಿಟ್ಟು ನೋಡುತ್ತಿದ್ದವರು ಬೇರೆ. ವರ್ಕಿಂಗ್ ಕಮಿಟಿಯ ಸದಸ್ಯರೆಲ್ಲರೂ ಒಳಗೆ ಸೇರಿದ್ದರು. ಸರೋಜಿನಿ

**ಮದುವೆ ಸಂಭ್ರಮ**

ದೇವಿ ಮೊದಲಾದ ಆಪ್ತರು ಗಾಂಧೀಜಿಯವರ ಕಡೇ ದರ್ಶನವೆಂದುಕೊಂಡು ಕಾದಿದ್ದರು. ಮಧ್ಯಾಹ್ನ ಹನ್ನೆರಡು ಗಂಟೆಗೆ ಮೊದಲೇ ಪೋಲೀಸ್ ಅಧಿಕಾರಿಗಳು ಗಾಂಧೀಜಿಯವರನ್ನು ಕರೆತಂದರು. ಚಟಚಟನೆಂದು ಹೆಜ್ಜೆ ಹಾಕುತ್ತ ಬಂದು ಗಾಂಧೀಜಿ ಒಳಗಿದ್ದವರ ಮುಖಗಳನ್ನು ಕಂಡೊಡನೆ ಚನ್ನಾಗಿ ನಕ್ಕರು. ನಿಶ್ಶಬ್ದದಿಂದಿದ್ದು ಅವರು ಬರುವುದನ್ನೇ ಎದುರುನೋಡುತ್ತ ರೆಪ್ಪೆ ಹಾಕದಿದ್ದ ಜನರಿಗಂತೂ ಅವರ ಮುಖವನ್ನು ಕಂಡು ಪರಮಾನಂದವಾಯಿತು. ಉತ್ತರಕ್ಷಣದಲ್ಲಿಯೇ ಎಲ್ಲರೂ ಅಳಬಹುದಾಗಿದ್ದುದು ಅವರ

ನಗುವಿನೆದುರಿನಲ್ಲಿ ದೂರವಾಯಿತು. ಆಪ್ತೇಷ್ಟರ ಸಮೀಪಕ್ಕೆ ಬಂದ ಮೇಲೆ ಕುಳಿತುಕೊಂಡು ಬಾಪುಜಿ ಹಾಗೆಯೇ ನಗುತ್ತಾ ಎಲ್ಲರನ್ನೂ ಕಂಡು "ನನ್ನ ಮದುವೆ ಸಂಭ್ರಮದಂತೆಯೆ ಇದೆ" ಎಂದು ಸಂತೋಷ ಪಟ್ಟರು. ಎಲ್ಲರೂ ಸಂತೋಷದಿಂದಿದ್ದರು.

ಜಿಲ್ಲಾ ಜಡ್ಜ್ ಬ್ರೂಮ್ಸ್‌ಫೀಲ್ಡ್ ಬಂದಕೂಡಲೆ ಎಲ್ಲರೂ ಮೌನವನ್ನು ಅವಲಂಬಿಸಿದರು. ಜಡ್ಜಿಗಳು ತಮ್ಮ ಸ್ಥಳದಲ್ಲಿ ಕುಳಿತಮೇಲೆ ವಿಚಾರಣೆಯು ಯಥಾವಿಧಿಯಾಗಿ ನಡೆಯಿತು. ಕ್ರಮತಪ್ಪದೆ ಕರ್ತವ್ಯವನ್ನು ನಿರ್ವಹಿಸಿದ ಜಡ್ಜಿಗೂ ಅಡ್ವೊಕೇಟ್ ಜನರಲ್ಲನಿಗೂ ಇತರ ಅಧಿಕಾರಿಗಳಿಗೂ ಆ ಸಮಯದಲ್ಲಿ ಚಿತ್ತವು ನೆಮ್ಮದಿಯಿಂದಲಾಗಲಿ ದರ್ಪದಿಂದಲಾಗಲಿ ತುಂಬಿರಲಿಲ್ಲ. ವಿಚಾರಣೆಯೂ ಗಾಂಧೀಜಿಯವರ ಹೇಳಿಕೆಯೂ ಜಡ್ಜಿಗಳ ತೀರ್ಮಾನವೂ ವಿನಯಗೌರವಗಳಿಂದ ನಡೆದವು. ತೀರ್ಪಿತ್ತ ಮೇಲೆ ನ್ಯಾಯಾಧಿಪತಿಯು ಹೊರಟನು. ಅಡ್ವೊಕೇಟ್ ಜನರಲ್ಲನು ಗಾಂಧೀಜಿಯವರ ಹಸ್ತವನ್ನು ಸ್ಪರ್ಶಮಾಡಿ ಹೊರಟನು. ಪೋಲೀಸ್ ಅಧಿಕಾರಿಗಳು ಮಾತ್ರ ಉಳಿದಿರಬೇಕಾಗಿತ್ತು. ಜಡ್ಜಿಗಳು ಹೊರಟ ಮೇಲೆ ಜನರು ಸ್ವತಂತ್ರವನ್ನು ವಹಿಸಿದರು. ವಿಚಾರಣೆಯ ಸಮಯದಲ್ಲಿ ಜನರೊಬ್ಬರಾದರೂ ಮರ್ಯಾದೆ ಮೀರಲಿಲ್ಲ. ಗಾಂಧೀಜಿಯವರ ಕಣ್ಣೆದುರಿನಲ್ಲಿ ಒರಟಾಟದ ಯೋಚನೆಯೇ ಯಾರಿಗೂ ಹುಟ್ಟಲಿಲ್ಲ.

ನ್ಯಾಯಾಧಿಪತಿಯು ತೆರಳಿದಬಳಿಕ ನ್ಯಾಯಸ್ಥಾನದ ಕೊಟಡಿಯು ಗಾಂಧೀಜಿಯವರ ಬೈಠಕ್‌ಖಾನೆಯಾಗಿಹೋಯಿತು. ಸ್ತ್ರೀಬಾಲವೃದ್ಧರು ಆತನ ಸುತ್ತಲೂ ಸೇರಿದರು. ಸರಸಸಲ್ಲಾಪಗಳಿಗೆ

ದರ್ಬಾರು

ಮೊದಲಾಯಿತು. ಬಾಪುಜಿ ಎಲ್ಲರನ್ನೂ ಮಾತನಾಡಿಸಿ ನಗುತ್ತಿದ್ದರು. ಐದುವರ್ಷ ವಯಸ್ಸಿನ ಹುಡುಗನೊಬ್ಬನೊಡನೆ ಅವನ ಸೂಟು ನೆಕ್‌ಟೈ ಕುರಿತು ಒಂದುಕ್ಷಣ ವಿಶ್ವಾಸದ ಲೇವಡಿಯನ್ನು ಮಾಡುವರು. ಮುಂದಿನ ಕ್ಷಣದಲ್ಲಿ ಒಬ್ಬ ವೃದ್ಧನಮೇಲೆ ಹಾಸ್ಯವನ್ನು ಬೀರುವರು. ಬಿರುದು ಬಿಲ್ಲೆಗಳಿಗಾಸೆಪಡುತ್ತಿದ್ದವನು ಆ ಮುದುಕ. "ಈ ವೃದ್ಧಾಪ್ಯದಲ್ಲಾದರೂ ಈ ಭ್ರಾಂತಿಯನ್ನು ಬಿಡಬಾರದೇ ನೀವು?" ಎನ್ನುವರು. ಆಕಡೆ ಅಳುವನ್ನು ತಡೆಯಲಾರದೆ

ಕಣ್ಣೀರನ್ನು ಬಿಡಲು ಸಿದ್ಧನಾಗಿದ್ದ ಒಬ್ಬ ಅನುಚರನ ಸಂತಾಪವನ್ನು ಒಂದುಸಲದ ನೋಟದಿಂದ ನಿಲ್ಲಿಸುವರು. ಈಕಡೆ ಮತ್ತೊಬ್ಬ ಅನುಚರನಿಗೆ ಮುಂದೆ ಮಾಡತಕ್ಕ ಕೆಲಸವನ್ನು ಸೂಚಿಸುವರು. ಆತನ ಆಶೀರ್ವಾದಗಳನ್ನು ಪಡೆದೆವೆಂದು ಸ್ತ್ರೀಯರು ಹಿಗ್ಗುತ್ತಿದ್ದಾರೆ. ಆತನ ಮುಖಭಾವವನ್ನು ಕಂಡು ಅನುಚರರೆಲ್ಲರೂ ಹೊಸದಾಗಿ ಧೈರ್ಯವನ್ನು ಗಂಟುಕಟ್ಟಿಕೊಳ್ಳುತ್ತಿದಾರೆ.

ಈ ರೀತಿಯಾಗಿ ಗಾಂಧೀಜಿಯ ದರ್ಬಾರೆನ್ನಬಹುದಾದ ದೃಶ್ಯವು ಅರ್ಧಗಂಟೆ ನಡೆಯಿತು. ಆ ವೇಳೆಗೆ ಪೋಲೀಸಿನವರು ಗಾಂಧೀಜಿಯವರನ್ನು ಜೈಲುಖಾನೆಗೊಯ್ಯಲು ವಾಹನವನ್ನು ಸಿದ್ಧಮಾಡಿದ್ದರು. ಅದನ್ನು ಕೇಳಿದಕೂಡಲೆ ಗಾಂಧೀಜಿಯವರೆದ್ದು ನಗುಮುಖದಿಂದ ಎಲ್ಲರನ್ನೂ ನೋಡುತ್ತ ಪೋಲೀಸ್ ಅಧಿಕಾರಿಗಳ ಜತೆಯಲ್ಲಿ ಹೊರಟು ವಾಹನದಲ್ಲಿ ಕುಳಿತರು.

ಸನ್ನಿವೇಶವು ಸಾಧಾರಣವಾದುದಲ್ಲ. ಭೀಕರವಾಗಿಯೂ ಗಂಭೀರವಾಗಿಯೂ ನಡೆಯತಕ್ಕ ದೃಶ್ಯವು ವಿನಯಗೌರವಗಳ ಚಲ್ಲಾಟದಿಂದ ತುಂಬಿ ಮೃದುಸರಸದಲ್ಲಿ ಕೊನೆಗಂಡಿತು. ಬಾಪುಜಿಯ ದಿವ್ಯಹಾಸ್ಯದ ಪ್ರಭಾವವೇ ಆ ಪರಿಣಾಮಕ್ಕೆ ಕಾರಣವಾಯಿತು. ಹಾಸ್ಯದಲ್ಲಿ ಯಾರಿಗೂ ನೋವಿಲ್ಲದಿದ್ದರೆ ಉತ್ತಮವೆಂದುಕೊಂಡ ನಾವು ಹಾಸ್ಯದ ಈ ತೇಜಸ್ಸನ್ನು ಹೇಗೆತಾನೇ ವಿವರಿಸಿಕೊಳ್ಳಬೇಕು! ಸಾಮಾನ್ಯರಿಗೆ ಸಿಲುಕದ ಹಾಸ್ಯಮಾತ್ರವಲ್ಲ, ಇದು ಸಾಮಾನ್ಯ ಕಾಲದೇಶವರ್ತಮಾನಗಳಲ್ಲಿ ಗೋಚರಿಸದ ಸರಕು. ಜೀವನವನ್ನೇ ಒಂದು ಲಕ್ಷ್ಯಸಾಧನೆಗಾಗಿ ತೆಗೆದಿಟ್ಟು ಬಾಳಿನ ಪ್ರತ್ಯಂಶದಲ್ಲಿಯೂ ಸಂಯಮವನ್ನು ಅಭ್ಯಾಸಮಾಡಿಕೊಂಡಾತನ ದೃಷ್ಟಿಯಲ್ಲಿ ಆ ವಿಚಾರಣೆಯೂ ಆ ತರುವಾಯದ ಕಾರಾಗಾರನಿರ್ಬಂಧವೂ ತನ್ನ ಮಾರ್ಗದಲ್ಲಿ ಕಳೆಯತಕ್ಕುದೆಂದು ನಿಷ್ಕರ್ಷೆಯಾದ ಸೋಪಾನಗಳು ಮಾತ್ರ. ಸಾಧನೆಯ ಗುರಿಯನ್ನು ಸಮಿಾಪಿಸುವ ಪ್ರಯತ್ನದಲ್ಲಿ ಅವಶ್ಯವಾಗಿ ಅನುಭವಿಸತಕ್ಕ ಅಂಶಗಳು ಮಾತ್ರ. ಚಾಮುಂಡಿ ಬೆಟ್ಟವನ್ನು ಹತ್ತಲು ಹೊರಟವನು ಬೆಟ್ಟದ ಬುಡದವರೆಗೂ ಹೆಜ್ಜೆಯಿಟ್ಟು ಮೆಟ್ಟಲು ಕಂಡೊಡನೆ ಎದೆಗುಂದಿದರೆ ಅಥವಾ ಕಾಲಿಗೆ

ಮುಳ್ಳು ಸೋಕಿದ ಯಾತನೆಗೆ ಮನಸೋತರೆ ಹೇಗೆ! ಅಶನಿಪಾತವಾಯಿತೆಂದು ಸಾಮಾನ್ಯರು ಭಾವಿಸಿಕೊಂಡು ದಿಗ್ಭ್ರಾಂತರಾಗಿ ಎರಡು ಕೈಗಳನ್ನೂ ನೆತ್ತಿಗೊತ್ತಿಕೊಳ್ಳುವ ಸಮಯದಲ್ಲಿ ಅಥವಾ ಅಪಾರವಾದ ಶೋಕವು ತೋರಿಕೊಂಡು ತೆರೆತೆರೆಯಾಗಿ ಮೇಲಿಂದಮೇಲುಕ್ಕಿಬಂದು ಸರ್ವ ಚೈತನ್ಯವನ್ನೂ ಮಣ್ಣುಪಾಲು ಮಾಡಿದಂತೆ ತೋರುವ ಸಮಯದಲ್ಲಿ ಧೈರ್ಯಮೇರುವಾಗಿರುವಾತನು ವಿನೋದಗ್ರಾಹಿಯಾಗಿದ್ದಲ್ಲಿ ಸಹಜವಾದ ಸರಸಭಾಷಣೆಯನ್ನು ಸಲ್ಲಿಸುತ್ತ ಸುತ್ತಲಿರುವವರನ್ನು ಸದಾ ಉಲ್ಲಾಸಗೊಳಿಸುತ್ತ ಹಾಸ್ಯವನ್ನು ಬೀರುವನು. ಆದರೆ ದೀನರಲ್ಲಿ ದೀನನಾಗಿ, ಭಕ್ತರಲ್ಲಿ ಪರಮಭಕ್ತನಾಗಿ, ನಿಷ್ಠೆಯಿಂದ ಕಠೋರವ್ರತಗಳನ್ನು ಕಟ್ಟಿಕೊಂಡಾತನು ಮಹತ್ಸಾಧನೆಯನ್ನು ಜೀವನಯಾತ್ರೆಯಲ್ಲಿಟ್ಟುಕೊಂಡು ಅದ್ಭುತವೆನಿಸುವ ಧೈರ್ಯಸ್ಥೈರ್ಯಗಳೊಂದಿಗೆ ದಿವ್ಯಹಾಸ್ಯವನ್ನು ತನ್ನ ಗುಣಗಳಲ್ಲಿ ಯತ್ಸಾಮಾನ್ಯಗುಣಗಳಾಗಿ ತೋರ್ಪಡಿಸಿದ ದೃಶ್ಯ ಜಗತ್ತಿಗೇ ದೊಡ್ಡದು. ಈ ದಿವ್ಯಹಾಸ್ಯವನ್ನು ತೋರುವಾತನು ಅಂಶಪುರುಷನಾಗಿರಬೇಕೆಂದು ವಿಚಾರಸಂಪನ್ನರಿಗೂ ವಿಚಾರವಿಹೀನರಿಗೂ ಸಮನಾಗಿ ತೋರುವುದು.

ಯಾತ್ರೆಯ ಮೆಟ್ಟಲು

ಏಕಲವ್ಯನು ಶ್ರೀ ಕೃಷ್ಣನಿಂದ ಹತನಾಗುವ ಸಂದರ್ಭವನ್ನು ನಮ್ಮ ಕೈಲಾಸಂ ನಾಟಕದಲ್ಲಿ ನಿರೂಪಿಸುತ್ತ ಪರಮಾತ್ಮನ ಲೀಲೆಯನ್ನು ಬಣ್ಣಿಸಿರುವನು. “ಬ್ರಹ್ಮಾಂಡ ಕಟಾಹಕ್ಕೂ ದೂರದಲ್ಲಿನ ಸಾಕ್ಷಿಯಂತಿರುವ ಪರಮಾತ್ಮನಿಗೆ ಲೋಕದಲ್ಲಿ ಜೀವಿಸುತ್ತಲಿರುವ ಪ್ರಾಣಿಗಳೆಲ್ಲರಲ್ಲಿಯೂ ಸಮಾನವಾದ ಕನಿಕರವುಂಟು. ದೊಡ್ಡದು ಚಿಕ್ಕದು ಎಂಬ ಭೇದವಿಲ್ಲ. ಅಮಿತವಾದ ಕರುಣೆಯಿಂದ ಕೂಡಿ ಭಗವಂತನು ಯಾವ ಪಕ್ಷಪಾತವೂ ಇಲ್ಲದೆ ಪ್ರತಿ ಜೀವಿಯ ಇಷ್ಟಾರ್ಥವನ್ನೂ ಸಲ್ಲಿಸಿಕೊಡುವನು. ಯಾವ ಪ್ರಾಣಿಯಾಗಲಿ ಅಂತಃಕರಣಪೂರ್ತಿಯಾಗಿ ಬಯಸಬೇಕು; ಬಯಕೆಯು ಒಳ್ಳೆಯದೋ ಕೆಟ್ಟದ್ದೋ ಎಂಬ ವಿಚಾರವೇ ಇಲ್ಲ, ಚನ್ನಾಗಿ ಬಯಸಬೇಕಾದುದೆಷ್ಟೋ ಅಷ್ಟೆ. ಬಯಕೆಯು ಬಲವಾಗಿದ್ದು ಭಗವಂತನನ್ನು ಮುಟ್ಟಿದೊಡನೆಯೇ ಎಲ್ಲ

ರಲ್ಲಿಯೂ ಸಮಾನ ವಿಶ್ವಾಸವುಳ್ಳ ಪರಮಾತ್ಮನು ಅಸ್ತು ಎನ್ನುವನು. ಭೇದವಾಗಲಿ ಪಕ್ಷಪಾತವಾಗಲಿ ಇಲ್ಲದೆ ತಾನಿರುವ ದೂರದಿಂದ ನಾನಾ ಜೀವಿಗಳ ಸಾಧನೆಯನ್ನೂ ಸುಖದುಃಖಗಳನ್ನೂ ಕಾಣುತ್ತಿರುವನು" ಎಂಬುದು ಅಲ್ಲಿಯ ಸಾರಾಂಶ. ಲೋಕವ್ಯಾಪಾರವನ್ನು ನೋಡುತ್ತ ಪರಮಾತ್ಮನು ನಗುವುದೇ ಆದರೆ ಆ ನಗುವನ್ನು ದಿವ್ಯ

ವಿಮಲಹಾಸ್ಯ

ವೆನ್ನಬಹುದೇನೋ! ಆ ದಿವ್ಯ ಹಾಸ್ಯದ ಕಾಂತಿಯು ಎಷ್ಟು ಸ್ವಚ್ಛವಾಗಿರಬಹುದೆಂದೂಹಿಸಲು ಕವಿಗಳ ಮನಸ್ಸಿರಬೇಕು. ಪೂರ್ವಕವಿಗಳು ಸತ್ಕೀರ್ತಿಯನ್ನೂ ಚಾರುಹಾಸವನ್ನೂ ಗೌರವಾದುದೆಂದು ಬಣ್ಣಿಸಿದ ರಹಸ್ಯವಿದೇಯೋ ಏನೋ!

ಪರಮಕರುಣಾಲುವಾದ ಪರಮೇಶ್ವರನು ಅತಿಪರಿಶುದ್ಧನೂ ಮಂಗಳಕರನೂ ಆದುದರಿಂದ ಶಿವನೆಂದೆನಿಸಿರುವನು. ಅಂತಹ ಪರಮೇಶ್ವರನು ನಕ್ಕ ದೃಶ್ಯವನ್ನೊಮ್ಮೆಯಾದರೂ ಕಾಲಿದಾಸನು ಕಂಡನು. ಕಂಡವನು ಅದನ್ನು ತನ್ನ ಮಾತುಗಳಿಂದ ವರ್ಣಿಸಿ ನಮ್ಮೆಲ್ಲರಿಗೂ ಗೋಚರವಾಗುವಂತೆ ನಿಲ್ಲಿಸಿಟ್ಟನು. ಪ್ರತಿದಿನವೂ ಪ್ರಾತಃಕಾಲದಲ್ಲಿ ಲೋಕವನ್ನು ನೋಡಿ ಪರಮೇಶ್ವರನು ನಗುವನಂತೆ;

ಕಾಲಿದಾಸನ ಕನಸು

ಆ ನಗುವಿನ ಕಾಂತಿಯು ರಾಶಿಯಾಗಿ ಘನರೂಪವನ್ನೆತ್ತಿ ಸ್ವಚ್ಛ ಶ್ವೇತವರ್ಣದ ಕೈಲಾಸಪರ್ವತವಾಗಿ ತ್ರಿದಶವನಿತಾದರ್ಪಣವಾಗಿ ನಿಲ್ಲುವುದಂತೆ. ಪರಮೇಶ್ವರನ ನಗುವಿನ ಕಾಂತಿಲಾವಣ್ಯಗಳನ್ನು ನೆನಪಿಗೆ ತರುವ ಗಾಂಧೀಜಿಯ ಹಾಸ್ಯವನ್ನು ಯೋಗ್ಯವಾಗಿ ವರ್ಣಿಸಲು ಕಾಲಿದಾಸನೇ ಪುನಃ ಜನ್ಮವೆತ್ತಬೇಕು. ಗಾಂಧೀಜಿಯ ಜೀವನ ಚರಿತ್ರೆಯನ್ನು ಯೋಗ್ಯವಾಗಿ ವಿವರಿಸಿಕೊಡಲು ವಾಲ್ಮೀಕಿ ವ್ಯಾಸ ಶುಕಮಹರ್ಷಿಗಳಂತಹವರು ಜನ್ಮವೆತ್ತಿ ತಪಸ್ಸು ಮಾಡಬೇಕು.

ಮುಂದಿನ ಭಾರತವರ್ಷದಲ್ಲಿ ವಾಲ್ಮೀಕಿ ವ್ಯಾಸ ಕಾಲಿದಾಸರಂತಹವರು ಹುಟ್ಟದಿರುತ್ತಾರೆಯೇ? ಈಗಲೇ ಜನ್ಮವೆತ್ತಿ ಎಲ್ಲಿಯೋ ಅಜ್ಞಾತರಾಗಿ ಸಣ್ಣ ವಯಸ್ಸಿನಲ್ಲಿದ್ದರೂ ಇರಬಹುದು.

---